# ಪುರಾಣಗಳಲ್ಲಿ ಕರ್ನಾಟಕ



ಮೈ. ನ. ನಾಗರಾಜ



# ಪುರಾಣಗಳಲ್ಲಿ ಕರ್ನಾಟಕ

ವೈ. ನ. ನಾಗರಾಜ




ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ನೃಪತುಂಗ ರಸ್ತೆ
ಬೆಂಗಳೂರು-೫೬೦ ೦೦೨

ಶ್ರೀ ಮ್ಯ. ನ. ನಾಗರಾಜ ಅವರಿಂದ ರಚಿಸಲ್ಪಟ್ಟ 'ಪುರಾಣಗಳಲ್ಲಿ ಕರ್ನಾಟಕ' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯುದವರಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ (ಜನವರಿ ೧೯೮೩) ಐಬಿಎಚ್ ಪ್ರಕಾಶನದವರ ಕೃಪೆಯಿಂದ ಪ್ರಕಟಿಸಲ್ಪಟ್ಟಿದ್ದು.

PURANAGALALLI KARNATAKA (Karnataka in the Puranas) —a monograph written in Kannada by M. N. Nagaraja. Published by The Directorate of Kannada and Culture, Government of Karnataka, 14/3A Nrupathunga Road, Bangalore-560 002, on the occasion of the *FIRST WORLD KANNADA CONFERENCE (January 1983)* by the Courtesy of IBH Prakashana, Gandhinagar, Bangalore-560 009.



ಬೆಲೆ ರೂ. ೨-೦೦

ಮುಖಚಿತ್ರ : ಚಂದ್ರನಾಥ್
ರೇಖಾಚಿತ್ರಗಳು : ಮನೋಹರ್
ಛಾಯಾಚಿತ್ರಗಳು : ಬಿ. ಕೇಸರ್ ಸಿಂಗ್

ಮುದ್ರಕರು : ಎಚ್. ಎಸ್. ಎನ್. ರಾವ್, ಐಬಿಎಚ್ ಪ್ರಕಾಶನ ಪ್ರಿಂಟರಿ,
ಬೆಂಗಳೂರು-೫೬೦ ೦೦೯

## ಪುರಾಣಗಳಲ್ಲಿ ಕರ್ನಾಟಕ

**ಕರ್ನಾಟಕದ ಪ್ರಾಚೀನತೆ :** ನಮ್ಮ ಕರ್ನಾಟಕವು ತುಂಬ ಪ್ರಾಚೀನವಾದುದು. ಬಹಳ ಹಿಂದಿನ ಕಾಲದಿಂದಲೂ ಕರ್ನಾಟಕವೂ ಇಲ್ಲಿಯ ಅನೇಕ ಸ್ಥಳಗಳೂ ಪ್ರಖ್ಯಾತವಾಗಿವೆ.

ಕರ್ನಾಟಕವು ಮೊದಲು ಮೈಸೂರು ದೇಶವೆಂದು ಕರೆಯಲ್ಪಡುತ್ತಿತ್ತು. ಮೈಸೂರು ಎಂಬುದು ಮಹಿಷಕ ಎಂಬುದರ ರೂಪಾಂತರ. ಮಹಿಷಾಸುರನೆಂಬ ರಾಕ್ಷಸನು ಇಲ್ಲಿ ವಾಸಮಾಡುತ್ತಿದ್ದುದರಿಂದ ಈ ಪ್ರದೇಶಕ್ಕೆ ಮಹಿಷಕ ಎಂಬ ಹೆಸರು ಬಂತು. ಮಹಿಷಕ ಎಂಬ ಪದ ರಾಮಾಯಣದಲ್ಲಿ ಉಲ್ಲೇಖವಾಗಿದೆ.

(ಶ್ರೀರಾಮನ ಅಪೇಕ್ಷೆಯ ಮೇರೆಗೆ ಸುಗ್ರೀವನು ಸೀತಾದೇವಿಯನ್ನು ಹುಡುಕಿಸುವ ಸಲುವಾಗಿ ತನ್ನ ಸೇನೆಯನ್ನು ವಿವಿಧ ದಿಕ್ಕುಗಳಿಗೆ ಕಳುಹಿಸುವನು. ದಕ್ಷಿಣ ದಿಕ್ಕಿಗೆ ತೆರಳಲಿದ್ದ ನೀಲ, ಹನುಮಂತ, ಅಂಗದ ಮುಂತಾದವರನ್ನು ಕುರಿತು ದಕ್ಷಿಣದ ವಿವಿಧ ದೇಶಗಳಲ್ಲಿ ಸೀತಾದೇವಿಯನ್ನು ಹುಡುಕುವಂತೆ ತಿಳಿಸಿದನು.)

ವಿದರ್ಭಾನೃಷ್ಟಿಕಾಂಶ್ಚೈವ ರಮ್ಯಾನ್ ಮಹಿಷಕಾನಪಿ ।
ತಥಾ ವಂಗಾನ್ ಕಲಿಂಗಾಂಶ್ಚ ಕೌಶಿಕಾಂಶ್ಚ ಸಮಂತತಃ ॥

"ವಿದರ್ಭ, ಋಷ್ಟಿಕ, ರಮ್ಯವಾದ ಮಹಿಷಕ ದೇಶ, ವಂಗ, ಕಲಿಂಗ, ಕೌಶಿಕ ಮೊದಲಾದ ಪ್ರಾಂತಗಳನ್ನು ಅನ್ವೇಷಿಸಿರಿ."

(ವಾಲ್ಮೀಕಿ, ರಾಮಾಯಣ, ಕಿಷ್ಕಿಂಧಾಕಾಂಡ)

ಮಹಾಭಾರತದಲ್ಲಿ ಮಹಿಷಕ, ಕರ್ನಾಟಕ–ಈ ಎರಡೂ ಹೆಸರುಗಳ ಉಲ್ಲೇಖವಿದೆ.

ದ್ರವಿಡಾಃ ಕೇರಳಾಃ ಪ್ರಾಚ್ಯಾಃ ಮೂಷಿಕಾ ವನವಾಸಿಕಾಃ !
ಕರ್ನಾಟಕಾ ಮಹಿಷಕಾಃ ವಿಕಲ್ಪಾ ಮೂಷಕಾಸ್ತಥಾ ॥

"ದಕ್ಷಿಣಾಪಥದಲ್ಲಿರುವ ದೇಶಗಳು ದ್ರವಿಡ, ಕೇರಳ, ಕರ್ನಾಟಕ, ಮಹಿಷಕ, ಇತ್ಯಾದಿ."

(ಮಹಾಭಾರತ, ಭೀಷ್ಮಪರ್ವ)

ಪುರಾಣಗಳ ಕಾಲದಲ್ಲಿ ಕರ್ನಾಟಕದ ಒಂದು ಭಾಗಕ್ಕೆ ಕುಂತಳದೇಶ ಎಂಬ ಹೆಸರೂ ಇತ್ತು. ಈಗಿನ ಬಳ್ಳಾರಿ, ಬೆಳಗಾವಿ, ಧಾರವಾಡ, ಚಿತ್ರದುರ್ಗ, ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸೇರಿದ ಕೆಲವು ಸ್ಥಳಗಳಿಂದ ಕುಂತಳದೇಶವಾಗಿತ್ತು. ಚಂದ್ರಹಾಸನು ಈ ದೇಶವನ್ನಾಳುತ್ತಿದ್ದನು. ಶಿವಮೊಗ್ಗ ಜಿಲ್ಲೆಯಲ್ಲಿರುವ ಕುಪ್ಪಟೂರು ಕುಂತಳನಗರವಾಗಿತ್ತು. ಅದೇ ಚಂದ್ರಹಾಸನ ರಾಜಧಾನಿ. ಚಿತ್ರದುರ್ಗದ ಚಂದ್ರವಳ್ಳಿಯು ಚಂದ್ರಹಾಸನಿಂದಾಗಿ ಆ ಹೆಸರು ಪಡೆದಿದೆ.

ಈಗಿನ ಕೊಡಗು ಜಿಲ್ಲೆಗೆ ಬ್ರಹ್ಮಕ್ಷೇತ್ರವೆಂದೂ ಕ್ರೋಢದೇಶವೆಂದೂ ಹೆಸರುಗಳಿದ್ದವು. ಧಾರವಾಡ ಜಿಲ್ಲೆಯಲ್ಲಿರುವ ಹಾನಗಲ್ಲಿಗೆ ಮತ್ಸ್ಯರಾಜವೆಂದೂ ಬಳ್ಳಾರಿಯ ಆನೆಗೊಂದಿಗೆ ಕಿಷ್ಕಿಂಧೆಯೆಂದೂ ಹೆಸರಿತ್ತು.

ಕರ್ನಾಟಕದ ಹೆಸರು ಪದ್ಮ, ಮಾರ್ಕಂಡೇಯ, ಮತ್ತು ವಿಷ್ಣುಧರ್ಮೋತ್ತರ ಪುರಾಣಗಳಲ್ಲಿ ಬಂದಿದೆ. ಶ್ರೀಮದ್ಭಾಗವತ ಮತ್ತು ಆನಂದ ರಾಮಾಯಣಗಳಲ್ಲೂ ಕರ್ನಾಟಕದ ಹೆಸರು ಕಂಡುಬರುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ನಮ್ಮ ಕನ್ನಡನಾಡಿನ ಅನೇಕ ಸ್ಥಳಗಳ ಉಲ್ಲೇಖವಾಗಿದೆ.

ಅಥಾಪರೇ ಜನಪದಾ ದಕ್ಷಿಣಾ ಮುನಿಪ್ರಜ್ಞಾವಾಃ ।
ಕರ್ಣಾಟಕಾ ಮಾಹಿಷಕಾ ವಿಕನ್ಧಾ ಮೂಷಿಕಾಸ್ತಥಾ ।
ರಘಿಲ್ಲಿಕಾಃ ಕುನ್ತಲಾಶ್ಚೈವ ಸೌಹೃದಾ ನಲಕಾನನಾಃ ॥

"ಎಲೈ ಮುನಿವರ್ಯರೇ ಕರ್ಣಾಟಕಾ, ಮಹಿಷಕ, ವಿಕಂಧ, ಮೂಷಿಕ, ರಘಿಲ್ಲಿಕಾ, ಕುಂತಲ, ಸೌಹೃದ, ನಲಕಾನನ ಮೊದಲಾದ ದಕ್ಷಿಣದೇಶಗಳು ಪ್ರಸಿದ್ಧವಾಗಿರುವವು."

(ಪದ್ಮಪುರಾಣ)

ಮಹಾರಾಷ್ಟ್ರಾಃ ಸಕರ್ಣಾಟಾ ಗೋನರ್ಪಾಶ್ಚಿತ್ರ ಕೂಟಕಾಃ ।
ಚೋಲಾಃ ಕೌಲಗಿರಾಶ್ಚೈವ ಕ್ರೌಂಚ ದ್ವೀಪ ಜಟಾಧರಾಃ ॥

"ಮಹಾರಾಷ್ಟ್ರ, ಕರ್ಣಾಟ, ಗೋನರ್ದ, ಚಿತ್ರಕೂಟಕ, ಚೋಲ, ಕಾಲಗಿರ, ಕೌಂಚದ್ವೀಪ, ಜಟಾಧರ (ಎಂಬುವು ದಕ್ಷಿಣ ಕುಕ್ಷಿ ಭಾಗವನ್ನು ಅವಲಂಬಿಸಿರುವ ದೇಶಗಳಾಗಿವೆ").

(ಮಾರ್ಕಂಡೇಯ ಪುರಾಣ)

ಪುಳಿಂದಾಶ್ಮಕಜೀಮೂತ ನರರಾಷ್ಟ್ರ ನಿವಾಸಿನಾಃ ।
ಕರ್ನಾಟಕಾ ಭೋಜಕಟಾ ದಕ್ಷಿಣಾಪಥವಾಸಿನಃ ॥

"ದಕ್ಷಿಣ ದಿಕ್ಕಿನಲ್ಲಿ ವಾಸಮಾಡುವ ಜನರನ್ನು ಪುಳಿಂಧರು, ಅಶ್ಮಕರು, ಜೀಮೂತರು, ನರದೇಶನಿವಾಸಿಗಳು, ಕರ್ನಾಟಕರು, ಭೋಜಕಟರು ಎಂದು ಕರೆಯುತ್ತಾರೆ."

(ವಿಷ್ಣುಧರ್ಮೋತ್ತರ ಪುರಾಣ).

ಕೃಷ್ಣಾತೀರಪ್ರದೇಶಾಂಶ್ಚ ಸಮತಿಕ್ರಮ್ಯ ಘೋಟಕಃ ।
ಕರ್ಣಾಟಕಂ ಮಹಾದೇಶಂ ಸಮತಿಕ್ರಮ್ಯ ಸತ್ವರಂ ॥

("ಶ್ರೀರಾಮನು ಅಶ್ವಮೇಧಯಾಗವನ್ನು ಮಾಡುವ ಸಮಯದಲ್ಲಿ ದಿಗ್ವಿಜಯಕ್ಕಾಗಿ ಬಿಟ್ಟ ಸೈನ್ಯವು ಯಾಗದ ಕುದುರೆಯೊಡನೆ) ಕೃಷ್ಣಾತೀರ ಪ್ರದೇಶಗಳನ್ನು ದಾಟಿ ಕರ್ಣಾಟಕ ಮಹಾದೇಶವನ್ನು ದಾಟಿತು."

(ಆನಂದ ರಾಮಾಯಣ)

ಶ್ರೀಮದ್ಭಾಗವತವು "ಕೊಂಕ, ವೆಂಕ ಕುಟಕಾನ್ ದಕ್ಷಿಣಕರ್ಣಾಟಕಾನ್" ಎಂದಿದೆ.

ಪುರಾತನ ಗ್ರಂಥಗಳಾದ ಸೋಮದೇವನ 'ಕಥಾಸರಿತ್ಸಾಗರ', ವರಾಹ ಮಿಹಿರನ 'ಬೃಹತ್‌ಸಂಹಿತೆ', ರಾಜಶೇಖರನ 'ಕಾವ್ಯಮೀಮಾಂಸೆ' ಮೊದಲಾದ ಗ್ರಂಥಗಳಲ್ಲಿ 'ಕರ್ಣಾಟ' ಶಬ್ದದ ಪ್ರಯೋಗವಿದೆ.

ನಮ್ಮ ಪುರಾಣ ಗ್ರಂಥಗಳಲ್ಲಿ ಕಂಡುಬರುವ ಕರ್ನಾಟಕದ ವಿವಿಧ ಸ್ಥಳಗಳನ್ನೂ ಅವುಗಳಿಗೆ ಸಂಬಂಧಿಸಿದ ಕಥೆಗಳನ್ನೂ ಸ್ವಲ್ಪಮಟ್ಟಿಗಾದರೂ ತಿಳಿಸಿಕೊಡುವುದು ಈ ಪುಸ್ತಕದ ಉದ್ದೇಶ.

**ರಾಮಾಯಣದಲ್ಲಿ :**

ಕನ್ನಡನಾಡಿಗೂ ರಾಮಾಯಣಕ್ಕೂ ನಿಕಟವಾದ ಸಂಬಂಧವಿದೆ.

ತಂದೆಯ ಮಾತನ್ನು ಪಾಲಿಸುವುದಕ್ಕಾಗಿ ಶ್ರೀರಾಮನು ಸೀತೆ, ಲಕ್ಷ್ಮಣ

ರೊಡನೆ ಅರಣ್ಯಕ್ಕೆ ಹೊರಟನಷ್ಟೆ. ಅರಣ್ಯದಲ್ಲಿದ್ದಾಗ ಅವರು ಅಗಸ್ತ್ಯಾಶ್ರಮಕ್ಕೆ ಹೋಗಿದ್ದರು. ಅಲ್ಲಿದ್ದ ಮುನಿಗಳು ಅವರಿಗೆ ಅಗಸ್ತ್ಯರ ಮಹಿಮೆಯನ್ನೂ ವಾತಾಪಿ, ಇಲ್ವಲರ ಕಥೆಯನ್ನೂ ಹೇಳಿದರು.

"ಹಿಂದೆ ಅಗಸ್ತ್ಯರು ವಿಂಧ್ಯಪರ್ವತವನ್ನು ದಾಟಿ ದಕ್ಷಿಣದಕಡೆ ಬಂದರು. ಅಲ್ಲಿ ಮಹಾಕೂಟ ಎಂಬ ಸ್ಥಳದಲ್ಲಿ ವಾತಾಪಿ ಮತ್ತು ಇಲ್ವಲ ಎಂಬ ಇಬ್ಬರು ರಾಕ್ಷಸರಿದ್ದರು. ಆ ಸ್ಥಳಕ್ಕೆ ಯಾರಾದರೂ ಬಂದರೆ ವಾತಾಪಿಯು ಮೇಕೆಯ



ರೂಪವನ್ನು ಧರಿಸಿಬಿಡುತ್ತಿದ್ದ. ಇಲ್ವಲನು ಬಂದವರನ್ನು ಆದರದಿಂದ ಬರ ಮಾಡಿಕೊಂಡು ಉಪಚರಿಸುವನು. ಅನಂತರ ಮೇಕೆಯನ್ನು ಕೊಂದು ಅಡುಗೆ ಮಾಡಿ ಬಡಿಸುತ್ತಿದ್ದ. ಅತಿಥಿಯ ಊಟವಾದ ನಂತರ 'ವಾತಾಪಿ ಹೊರಗೆ ಬಾ' ಎಂದು ಕರೆಯುತ್ತಿದ್ದ. ವಾತಾಪಿಯು ಅತಿಥಿಯ ಹೊಟ್ಟೆಯನ್ನು ಸೀಳಿ ಕೊಂಡು ಹೊರಗೆ ಬರುತ್ತಿದ್ದ. ಅನಂತರ ಅವರಿಬ್ಬರೂ ಸತ್ತ ಅತಿಥಿಯನ್ನು ತಿಂದುಹಾಕುತ್ತಿದ್ದರು.

ವಾತಾಪೇ ನಿಷ್ಕ್ರಮಸ್ವೇತಿ ಸ್ವರೇಣ ಮಹತಾ ವದನ್ ।
ತತೋ ಭ್ರಾತುರ್ವಚಃ ಶ್ರುತ್ವಾ ವಾತಾಪಿರ್ಮೇಷವನ್ನದನ್ ॥
ಭಿತ್ವಾ ಭಿತ್ವಾ ಶರೀರಾಣಿ ಬ್ರಾಹ್ಮಣಾನಾಂ ವಿನಿಷ್ಪತತ್ ।
ಬ್ರಾಹ್ಮಣಾನಾಂ ಸಹಸ್ರಾಣಿ ತೈರೇವಂ ಕಾಮರೂಪಿಭಿಃ ॥

"ಬ್ರಾಹ್ಮಣರ ಭೋಜನವಾದ ಮೇಲೆ ಇಲ್ವಲನು 'ವಾತಾಪಿ ಹೊರಗೆ ಬಾ' ಎಂದು ಗಟ್ಟಿಯಾಗಿ ಕರೆಯುತ್ತಿದ್ದನು. ಅಣ್ಣನ ಮಾತನ್ನು ಕೇಳಿದೊಡನೆ ವಾತಾಪಿಯು 'ಮೇ ! ಮೇ !' ಎಂದು ಮೇಕೆಯಂತೆ ಅರಚುತ್ತ ಆ ಬ್ರಾಹ್ಮಣರ ಶರೀರವನ್ನು ಭೇದಿಸಿಕೊಂಡು ಹೊರಗೆ ಬರುತ್ತಿದ್ದನು."

(ವಾಲ್ಮೀಕಿ ರಾಮಾಯಣ, ಅರಣ್ಯಕಾಂಡ)

"ಒಮ್ಮೆ ಅಗಸ್ತ್ಯರೂ ಮಹಾಕೂಟಕ್ಕೆ ಬಂದರು. ಎಂದಿನಂತೆ ಇಲ್ವಲನು ಅವರನ್ನು ಆದರಿಸಿದ. ಮೇಕೆಯ ಊಟವನ್ನು ಬಡಿಸಿದ. ಅಗಸ್ತ್ಯರಿಗೆ ಇವರ ಸಂಚು ಗೊತ್ತು. ಅವರು ಊಟವಾದ ಕೂಡಲೇ 'ವಾತಾಪಿ, ಜೀರ್ಣವಾಗಿ ಬಿಡು' ಎಂದರು. ವಾತಾಪಿ ಅಗಸ್ತ್ಯರ ಹೊಟ್ಟೆಯಲ್ಲೇ ಕರಗಿಹೋದ. ಅನಂತರ ಅಗಸ್ತ್ಯರು ಇಲ್ವಲನಿಗೆ ಶಾಪಕೊಟ್ಟು ಅವನನ್ನೂ ಕೊಂದರು.

ಮಹಾಕೂಟಕ್ಕೆ ವಾತಾಪಿಪುರ ಎಂಬ ಹೆಸರೂ ಇತ್ತು. ಈಗ ಬಿಜಾಪುರ ಜಿಲ್ಲೆಯಲ್ಲಿರುವ ಸುಪ್ರಸಿದ್ಧವಾದ ಬಾದಾಮಿಯೇ ಈ ಮಹಾಕೂಟ.

ಶ್ರೀರಾಮನು ಸೀತೆ, ಲಕ್ಷ್ಮಣರೊಂದಿಗೆ ಪಂಚವಟಿಯಲ್ಲಿದ್ದಾಗ ಲಂಕಾಸುರನಾದ ರಾವಣನು ಮೋಸದಿಂದ ಸೀತೆಯನ್ನು ಅಪಹರಿಸಿದನು. ಅವಳನ್ನು ಆಕಾಶಮಾರ್ಗವಾಗಿ ಒಯ್ಯುತ್ತಿದ್ದಾಗ ಜಟಾಯುವೆಂಬ ಪಕ್ಷಿರಾಜನು ಅವನನ್ನು ಅಡ್ಡಗಟ್ಟಿದನು. ರಾವಣನು ಜಟಾಯುವಿನ ರೆಕ್ಕೆ ಪುಕ್ಕಗಳನ್ನು ಕಡಿದು ಬಿಡಲು ಆ ಪಕ್ಷಿರಾಜನು ಭೂಮಿಯ ಮೇಲೆ ಬಿದ್ದನು. ಮುಂದೆ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಜಟಾಯುವಿದ್ದ ಸ್ಥಳಕ್ಕೆ ಬಂದರು.

ಪಕ್ಷಿರಾಜನು ಅವರಿಗೆ ನಡೆದ ಸಂಗತಿಯನ್ನು ತಿಳಿಸಿ ಪ್ರಾಣಬಿಟ್ಟನು. ಜಟಾಯುವು ರಾವಣನೊಡನೆ ಹೋರಾಡಿದ್ದ ಸ್ಥಳ ಜಟಂಗಿ ರಾಮೇಶ್ವರ. ಇದು ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯ ಬಳಿ ಇದೆ.

ರಾಮಲಕ್ಷ್ಮಣರು ಜಟಾಯುವಿಗೆ ಅಂತ್ಯ ಸಂಸ್ಕಾರವನ್ನು ಮಾಡಿ ಕಿಷ್ಕಿಂಧೆಗೆ ಬಂದರು. ಇಲ್ಲಿಂದ ಕಿಷ್ಕಿಂಧಾಕಾಂಡ ಪ್ರಾರಂಭವಾಗುತ್ತದೆ. ಕಿಷ್ಕಿಂಧಾ ಕಾಂಡದ ಸಂಪೂರ್ಣ ಕಥೆ ಕರ್ನಾಟಕದಲ್ಲೇ ನಡೆದಿದೆ ಎಂದು ನಾವೆಲ್ಲರೂ ಹೆಮ್ಮೆಪಡಬಹುದು.

ರಾಮಲಕ್ಷ್ಮಣರು ಮೊದಲು ಪಂಪಾಕ್ಷೇತ್ರಕ್ಕೆ ಬಂದರು. ಈ ಕ್ಷೇತ್ರದ ಕಥೆ ಹೀಗಿದೆ: ಪಂಪಾದೇವಿ ಬ್ರಹ್ಮನ ಮಗಳು. ಅವಳು ಹೇಮಕೂಟ ಪರ್ವತದಲ್ಲಿ ಪರಶಿವನನ್ನು ಕುರಿತು ತಪಸ್ಸು ಮಾಡಿದಳು. ಶಿವನನ್ನು 'ನೀನೇ ನನ್ನ ಪತಿಯಾಗು' ಎಂದು ಪ್ರಾರ್ಥಿಸಿದಳು. ಶಿವನು ಅವಳನ್ನು ಮದುವೆಯಾಗಿ ಪಂಪಾಪತಿ ಆದ. ಆ ಸ್ಥಳವೇ ಪಂಪಾಕ್ಷೇತ್ರ. ಬಳ್ಳಾರಿ ಜಿಲ್ಲೆಯಲ್ಲಿರುವ ಸುಪ್ರಸಿದ್ಧವಾದ ಹಂಪೆಯೇ ಇದು. ಇದರ ಸುತ್ತ ಹೇಮಕೂಟ, ಮಾಲ್ಯವಂತ, ಮತಂಗ, ಋಷ್ಯಮೂಕ ಮತ್ತು ಕಿಷ್ಕಿಂಧ ಎಂಬ ಪರ್ವತಗಳಿವೆ.

ಪಂಪಾಕ್ಷೇತ್ರದಲ್ಲಿ ಮತಂಗ ಮುನಿಗಳ ಆಶ್ರಮವಿದ್ದಿತು. ಅದು ಪಂಪಾ ಸರೋವರದ ಪಶ್ಚಿಮ ತೀರದಲ್ಲಿತ್ತು.

> ತೌ ಪುಷ್ಕರಿಣ್ಯಾಃ ಪಂಪಾಯಾಸ್ತೀರಮಾಸಾದ್ಯ ಪಶ್ಚಿಮಮ್ ।
> ಅಪಶ್ಯತಾಂ ತತಸ್ತತ್ರ ಶಬರ್ಯಾ ರಮ್ಯಮಾಶ್ರಮಮ್ ॥

"ಪಂಪಾ ಸರೋವರದ ಪಶ್ಚಿಮ ತೀರವನ್ನು ಸೇರಿದರು. ಅಲ್ಲಿ (ರಾಮಲಕ್ಷ್ಮಣರು) ಶಬರಿಯ ರಮ್ಯವಾದ ಆಶ್ರಮವನ್ನು ಕಂಡರು."

(ವಾಲ್ಮೀಕಿ ರಾಮಾಯಣ, ಅರಣ್ಯಕಾಂಡ)

ಭಕ್ತಿಪರಾಯಣೆ ಶಬರಿಯು ಶ್ರೀರಾಮನ ದರ್ಶನಕ್ಕಾಗಿ ಕಾದಿದ್ದಳು. ಶ್ರೀರಾಮನು ಇಲ್ಲಿಗೆ ಬಂದಾಗ ತುಂಬ ಶ್ರದ್ಧೆ ಭಕ್ತಿಗಳಿಂದ ಅವನನ್ನು ಸತ್ಕರಿಸಿ ಮೋಕ್ಷವನ್ನು ಪಡೆದಳು. ಭಕ್ತಾಗ್ರಣಿ ಶಬರಿಯು ನಮ್ಮ ಕರ್ನಾಟಕದವಳು.

ಮುಂದೆ ಶ್ರೀರಾಮಲಕ್ಷ್ಮಣರು ಪಂಪಾ ಸರೋವರವನ್ನು ಕಂಡರು. ರಾಮಾಯಣದ ಅರಣ್ಯಕಾಂಡ ಮತ್ತು ಕಿಷ್ಕಿಂಧಾಕಾಂಡಗಳಲ್ಲಿ ಪಂಪಾಸರೋ

ವರದ ಮನೋಹರ ವರ್ಣನೆ ಇದೆ. ಪಂಪಾ ನದಿಯು ಈ ಸರೋವರದಲ್ಲಿ ಹುಟ್ಟಿ ತುಂಗಭದ್ರಾನದಿಯನ್ನು ಸೇರುತ್ತದೆ.

ಕಬಂಧನೆಂಬ ಶಾಪಗ್ರಸ್ತ ಗಂಧರ್ವನು ಶ್ರೀರಾಮನಿಗೆ ಕಿಷ್ಕಿಂಧೆಯ ಮಾರ್ಗದರ್ಶನ ಮಾಡುತ್ತಾ ಪಂಪಾಸರೋವರದ ಸೌಂದರ್ಯವನ್ನೂ ಮಹಿಮೆಯನ್ನೂ ತಿಳಿಸಿದನು.

ತತಃ ಪುಷ್ಕರಿಣೀಂ ವೀರೌ ಪಂಪಾಂ ನಾಮ ಗಮಿಷ್ಯಥಃ ।
ಅಶರ್ಕರಾಮವಿಭ್ರಂಶಾಂ ಸಮತೀರ್ಥಾಮಶೈವಲಾಮ್ ॥
ರಾಮ ಸಂಜಾತವಾಲೂಕಾಂ ಕಮಲೋತ್ಪಲಶಾಲಿನೀಂ ।
ತತ್ರ ಹಂಸಾಃ ಪ್ಲವಾಃ ಕ್ರೌಂಚಾಃ ಕುರರಾಶ್ಚೈವ ರಾಘವ ॥
ವಲ್ಗುಸ್ವನಾ ನಿಕೂಜಂತಿ ಪಂಪಾಸಲಿಲಗೋಚರಾಃ ।
ಪದ್ಮಗಂಧಿ ಶಿವಂ ವಾರಿಸ್ವಾದು ಶೀತಮನಾಮಯಮ್ ।
ಉದ್ಧೃತ್ಯ ಸಂತತಾಕ್ಲಿಷ್ಟಂ ರೌಪ್ಯಸ್ಫಾಟಿಕ ಸಂನಿಭಮ್ ॥

"ಮುಂದೆ ಪಂಪಾ ಎಂಬ ಪುಷ್ಕರಿಣಿಯನ್ನು ಸೇರುವಿರಿ. ಆ ಸರೋವರದಲ್ಲಿ ಜಾರುವ ನೊರಜು ಕಲ್ಲುಗಳಿಲ್ಲ. ದಡವು ಕುಸಿದಿಲ್ಲ. ಇಳಿಯುವ ಸ್ಥಳಗಳಲ್ಲಿ ನೀರು ಒಂದೇ ಮಟ್ಟದಲ್ಲಿದೆ. ಪಾಚಿಕಟ್ಟಿಲ್ಲ. ಶ್ರೀರಾಮ, ಅದರ ತಳದಲ್ಲಿ ಕಲ್ಲು ಹರಳಿದೆಯೇ ಹೊರತು ಕೆಸರಿಲ್ಲ. ಪಂಪಾಸರೋವರದಲ್ಲಿ ತಾವರೆ ನೈದಿಲೆಗಳು ತುಂಬಿವೆ. ಹಂಸ, ಕಾರಂಡವ, ಕ್ರೌಂಚ, ಕುರರ ಮೊದಲಾದ ಪಕ್ಕಿಗಳು ಮಂಜುಳಸ್ವರದಲ್ಲಿ ಕೂಗುತ್ತವೆ. ಪಂಪಾಸರೋವರದ ಪುಷ್ಪರಾಶಿಯ ಮಧ್ಯದಲ್ಲಿರುವ ಶುಭಜಲವು ಪದ್ಮಗಂಧಿಯಾಗಿರುತ್ತದೆ. ರುಚಿಕರವೂ ಶೀತಲವೂ ಆದ ಈ ನೀರು ಆರೋಗ್ಯಕರವಾದದ್ದು."

(ವಾಲ್ಮೀಕಿ ರಾಮಾಯಣ, ಅರಣ್ಯಕಾಂಡ)

ಮುಂದೆ ಶ್ರೀರಾಮನು ಪಂಪಾಸರೋವರದಲ್ಲಿ ಸ್ನಾನಮಾಡಿ ಆ ಸರೋವರದ ಸೌಂದರ್ಯವನ್ನು ಕೊಂಡಾಡುತ್ತಾನೆ.

ವಿವೇಶ ಪಂಪಾಂ ನಲಿನೀಂ ಮನೋಹರಾಂ
ರಘೂತ್ತಮಃ ಶೋಕವಿಷಾದಯಂತ್ರಿತಃ ॥
ದದರ್ಶ ಪಂಪಾಂ ಶುಭದರ್ಶಕಾನನಾ-
ಮನೇಕನಾನಾವಿಧಪಕ್ಷಿ ಜಾಲಕಾಮ್ ॥

"ಶೋಕದಿಂದಲೂ ಆಯಾಸದಿಂದಲೂ ಪರವಶನಾಗಿದ್ದ ಶ್ರೀರಾಮನು ಮನೋಹರವಾದ ಪಂಪಾಸರೋವರದಲ್ಲಿ ಸ್ನಾನಕ್ಕಾಗಿ ಇಳಿದನು. ಅಂದವಾದ ವನದಿಂದಲೂ ನಾನಾವಿಧ ಪಕ್ಷಿಗಳಿಂದಲೂ ಮನೋಜ್ಞವಾದ ಪಂಪಾಸರೋವರವನ್ನು ಸವಿಾಕ್ಷಿಸಿದನು."

(ವಾಲ್ಮೀಕಿ ರಾಮಾಯಣ, ಅರಣ್ಯಕಾಂಡ)

ಸೌಮಿತ್ರೇ ಶೋಭತೇ ಪಂಪಾ ವೈಡೂರ್ಯವಿಮಲೋದಕಾ ।
ಫುಲ್ಲಪದ್ಮೋತ್ಪಲವತೀ ಶೋಭಿತಾ ವಿವಿಧೈರ್ದ್ರುಮೈಃ ॥
ಸೌಮಿತ್ರೇ ಪಶ್ಯ ಪಂಪಾಯಾಃ ಕಾನನಂ ಶುಭದರ್ಶನಮ್ ।
ಯತ್ರ ರಾಜಂತಿ ಶೈಲಾಭಾ ದ್ರುಮಾಃ ಸಶಿಖರಾ ಇವ ॥
ಧನ್ಯಾ ಲಕ್ಷ್ಮಣ ಸೇವಂತೇ ಪಂಪೋಪವನಮಾರುತಮ್ ।

"ಲಕ್ಷ್ಮಣ, ವೈಡೂರ್ಯದಂತಿರುವ ತಿಳಿನೀರಿನಿಂದ ತುಂಬಿದ ಈ ಪಂಪೆ ಎಷ್ಟು ಚೆನ್ನಾಗಿದೆ! ತಾವರೆ ನೈದಿಲೆಗಳು ಅರಳಿ ನಿಂತಿವೆ. ತೀರದಲ್ಲಿರುವ ವಿವಿಧ ವೃಕ್ಷಗಳಿಂದ ಈ ಕೊಳವು ಮನೋಹರವಾಗಿದೆ. ಸುತ್ತಲೂ ಬೆಳೆದಿರುವ ಮನೋಜ್ಞವಾದ ಈ ಕಾನನವನ್ನು ನೋಡು! ಪರ್ವತಾಕಾರವಾದ ಉನ್ನತ ವೃಕ್ಷಗಳನ್ನು ನೋಡು! ಎತ್ತರದಲ್ಲಿರುವ ಕೊಂಬೆಗಳು ಶಿಖರಗಳಂತೆ ಕಾಣಿಸುತ್ತವೆ. ಲಕ್ಷ್ಮಣ, ಪಂಪಾತೀರದಲ್ಲಿ ತಂಗಾಳಿಯನ್ನು ಸೇವಿಸುವವರೇ ಧನ್ಯರು."

(ವಾಲ್ಮೀಕಿ ರಾಮಾಯಣ, ಕಿಷ್ಕಿಂಧಾಕಾಂಡ)

ಪಂಪಾಸರೋವರವನ್ನು ದಾಟಿ ಅವರು ಋಷ್ಯಮೂಕಪರ್ವತವನ್ನು ಸೇರಿದರು. "ಪಂಪಾಸರೋವರದ ಪೂರ್ವದಿಕ್ಕಿನಲ್ಲಿರುವ ಈ ಪರ್ವತವನ್ನು ಬ್ರಹ್ಮನು ಸೃಷ್ಟಿಸಿದ್ದಾನೆ. ಇದರ ಶಿಖರದಲ್ಲಿ ಮಲಗಿದ ಪುರುಷನಿಗೆ ಬೀಳುವ ಶುಭಸ್ವಪ್ನವು ಕೈಗೂಡುವುದು. ಧರ್ಮವಿರುದ್ಧವಾಗಿ ನಡೆಯುವ ಪಾಪಿಯು ಈ ಗಿರಿಯನ್ನು ಹತ್ತುವುದಿಲ್ಲ. ಏಕೆಂದರೆ ಇಲ್ಲಿ ಕಾವಲಿರುವ ಶಿಶುನಾಗನೆಂಬ ರಾಕ್ಷಸರು ಆ ಪಾಪಿಯು ಮಲಗಿರುವಾಗ ಕೊಂದುಹಾಕುತ್ತಾರೆ"–ಎಂದು ರಾಮಾಯಣವು ತಿಳಿಸುತ್ತದೆ.

ಋಷ್ಯಮೂಕಸ್ತು ಪಂಪಾಯಾಃ ಪುರಸ್ತಾತ್ ಪುಷ್ಪಿತದ್ರುಮಃ ।
ಸುದುಃಖಾರೋಹಣೋ ನಾಮ ಶಿಶುನಾಗಾಭಿರಕ್ಷಿತಃ ॥
ಉದಾರೋ ಬ್ರಹ್ಮಣಾ ಚೈವ ಪೂರ್ವಕಾಲೇ ವಿನಿರ್ಮಿತಃ ।

"ಪಂಪಾಸರೋವರದ ಪೂರ್ವದಿಕ್ಕಿಗೆ ಪುಷ್ಪಿತದ್ರುಮಗಳಿರುವ ಋಷ್ಯಮೂಕಗಿರಿಯಿದೆ. ಅದನ್ನು ಹತ್ತುವುದು ಕಷ್ಟ. ಅಲ್ಲಿ ಶಿಶುನಾಗರೆಂಬ ರಾಕ್ಷಸರು ಬೆಟ್ಟಕ್ಕೆ ಕಾವಲಾಗಿದ್ದಾರೆ. ಪುರಾತನಕಾಲದಲ್ಲಿ ಬ್ರಹ್ಮನು ಅದನ್ನು ಪ್ರಶಸ್ತವಾದ ಪರ್ವತವಾಗಿರಲೆಂದು ಸೃಜಿಸಿದ್ದಾನೆ."

(ವಾಲ್ಮೀಕಿ ರಾಮಾಯಣ, ಅರಣ್ಯಕಾಂಡ)

ಈ ಋಷ್ಯಮೂಕಪರ್ವತವು ತುಂಗಭದ್ರಾನದಿಯ ದಡದಲ್ಲಿದೆ. ಶ್ರೀರಾಮಲಕ್ಷ್ಮಣರು ಈ ಪರ್ವತದಲ್ಲಿ ಸುಗ್ರೀವನನ್ನು ಕಂಡರು.

ಸುಗ್ರೀವನು ಮಹಾಬಲಶಾಲಿಯಾದ ವಾಲಿಯ ತಮ್ಮ; ಕಿಷ್ಕಿಂಧೆಯನ್ನು ಆಳುತ್ತಿದ್ದ. ವಾಲಿಯು ತನ್ನ ತಮ್ಮನನ್ನು ಅನ್ಯಾಯವಾಗಿ ರಾಜ್ಯದಿಂದ ಹೊರಗೆ ಓಡಿಸಿಬಿಟ್ಟಿದ್ದನು. ಸುಗ್ರೀವನು ಎಲ್ಲಿ ಹೋದರೂ ವಾಲಿಯು ಅವನನ್ನು ಹಿಡಿದು ಕೊಲ್ಲುವ ಬೆದರಿಕೆ ಇತ್ತು. ಆದರೆ ವಾಲಿಯು ಮತಂಗಾಶ್ರಮದಲ್ಲಿದ್ದ ಋಷ್ಯಮೂಕಪರ್ವತಕ್ಕೆ ಮಾತ್ರ ಬರುವ ಹಾಗಿರಲಿಲ್ಲ. ಏಕೆಂದರೆ ಹಿಂದೊಮ್ಮೆ ಅವನು ದುಂದುಭಿ ಎಂಬ ರಾಕ್ಷಸನನ್ನು ಕೊಂದು ಅವನ ದೇಹವನ್ನು ಸಮುದ್ರಕ್ಕೆ ಎಸೆದನು. ಆ ರಾಕ್ಷಸನ ಶರೀರದಿಂದ ಸುರಿಯುತ್ತಿದ್ದ ರಕ್ತವು ಮತಂಗಮುನಿಗಳ ಆಶ್ರಮದಲ್ಲಿ ಬಿತ್ತು. ಮುನಿಗಳು ಕೋಪಗೊಂಡು 'ಈ ಕಾರ್ಯವನ್ನು ಮಾಡಿದವನು ಈ ಆಶ್ರಮದಲ್ಲಿ ಕಾಲಿಟ್ಟರೆ ಸತ್ತುಹೋಗಲಿ' ಎಂದು ಶಾಪ ಕೊಟ್ಟರು.

ಶಾಪಧಾರಣಭೀತಸ್ತು ವಾಲೀ ವಿಹ್ವಲತಾಂ ಗತಃ !
ತತಃ ಶಾಪಭಯಾದ್ಭೀತ ಋಷ್ಯಮೂಕಂ ಮಹಾಗಿರಿಮ್ ॥

"ಹೀಗೆ ಶಾಪ ಬಂದುದರಿಂದ ವಾಲಿಯು ಭೀತನಾಗಿ ಕಳವಳಕ್ಕೀಡಾದನು. ಅಲ್ಲಿಂದ ಮೊದಲುಗೊಂಡು ವಾಲಿಯು ಋಷ್ಯಮೂಕಪರ್ವತದಲ್ಲಿ ಕಾಲಿಡುವುದಿಲ್ಲ."

(ವಾಲ್ಮೀಕಿ ರಾಮಾಯಣ, ಕಿಷ್ಕಿಂಧಾಕಾಂಡ)

ಶ್ರೀರಾಮಲಕ್ಷ್ಮಣರು ಇಲ್ಲಿಗೆ ಬಂದಾಗ ಸುಗ್ರೀವನು ಅವರನ್ನು ಆದರದಿಂದ ಸ್ವಾಗತಿಸಿದನು. ಅವರಿಂದ ಸೀತಾಪಹರಣದ ವಿಷಯವನ್ನು ತಿಳಿದುಕೊಂಡನು. ಆಗ ಸುಗ್ರೀವನಿಗೆ ಕೆಲವು ದಿನಗಳ ಹಿಂದೆ ಆಕಾಶಮಾರ್ಗದಲ್ಲಿ ರಾಕ್ಷಸನೊಬ್ಬನು ಓರ್ವ ಹೆಂಗಸನ್ನು ಬಲವಂತವಾಗಿ ಕರೆದುಕೊಂಡುಹೋಗು

ತಿದ್ದುದು ನೆನಪಾಯಿತು. ಆ ಹೆಂಗಸು ಪರ್ವತದಲ್ಲಿದ್ದ ಸುಗ್ರೀವ ಮತ್ತು ಸಂಗಡಿಗರನ್ನು ನೋಡಿ ತನ್ನ ಆಭರಣಗಳನ್ನು ಗಂಟುಕಟ್ಟಿ ಕೆಳಗೆ ಹಾಕಿದ್ದಳು. ಸುಗ್ರೀವನು ಅದನ್ನು ಜೋಪಾನವಾಗಿ ತೆಗೆದಿಟ್ಟಿದ್ದನು. ಆ ಆಭರಣಗಳನ್ನು ಶ್ರೀರಾಮನಿಗೆ ತೋರಿಸಿದನು. ಅವು ಸೀತೆಯ ಆಭರಣಗಳೇ ! ಹೀಗೆ ಸೀತಾದೇವಿಯ ಆಭರಣಗಳು ದೊರಕಿದ್ದು ಕರ್ನಾಟಕದಲ್ಲಿ.

ಮುಂದೆ ಸುಗ್ರೀವನು ಶ್ರೀರಾಮನ ಬಳಿ ತನ್ನ ದುಃಖವನ್ನು ತೋಡಿಕೊಂಡನು. ಅಣ್ಣನು ತನಗೆ ಮಾಡಿರುವ ಅನ್ಯಾಯದಿಂದ ತಾನು ಬೆಟ್ಟಗುಡ್ಡಗಳಲ್ಲಿ ತಲೆ ತಪ್ಪಿಸಿಕೊಂಡು ತಿರುಗಾಡುವ ದುಸ್ಥಿತಿ ಬಂದಿದೆಯೆಂದು ತಿಳಿಸಿದನು. ತನಗೆ ಸಹಾಯ ಮಾಡಬೇಕೆಂದು ಶ್ರೀರಾಮನನ್ನು ಕೋರಿದನು. ಅಣ್ಣನಿಂದ ಅನ್ಯಾಯ ಹೊಂದಿದ್ದ ಸುಗ್ರೀವನಿಗೆ ಸಹಾಯಮಾಡಲು ಶ್ರೀರಾಮನು ಒಪ್ಪಿದನು. ವಾಲಿಯನ್ನು ಸಂಹರಿಸಿದನು. ಸುಗ್ರೀವನಿಗೆ ಕಿಷ್ಕಿಂಧೆಯನ್ನು ಆಳುವಂತೆ ಹೇಳಿದನು.

ಇತಿ ರಾಮಾಭ್ಯನುಜ್ಞಾತಃ ಸುಗ್ರೀವೋ ವಾನರಾಧಿಪಃ ।
ಪ್ರವಿವೇಶ ಪುರೀಂ ರಮ್ಯಾಂ ಕಿಷ್ಕಿಂಧಾಂ ವಾಲಿಪಾಲಿತಾಮ್ ॥

"ಈ ರೀತಿಯಲ್ಲಿ ಶ್ರೀರಾಮನ ಅನುಜ್ಞೆಯನ್ನು ಪಡೆದು ವಾನರೇಶ್ವರನಾದ ಸುಗ್ರೀವನು ವಾಲಿಪಾಲಿತವಾಗಿದ್ದ ಕಿಷ್ಕಿಂಧಾನಗರವನ್ನು ಪ್ರವೇಶಿಸಿದನು."

(ವಾಲ್ಮೀಕಿ ರಾಮಾಯಣ, ಕಿಷ್ಕಿಂಧಾಕಾಂಡ)

ಬಳ್ಳಾರಿ ಜಿಲ್ಲೆಯಲ್ಲಿರುವ ಆನೆಗೊಂದಿಯೇ ಕಿಷ್ಕಿಂಧೆ.

ಶ್ರೀರಾಮನು ಮಾಡಿದ ಉಪಕಾರದಿಂದ ಸುಗ್ರೀವ ಮತ್ತು ಅವನ ಸಂಗಡಿಗರಿಗೆ ತುಂಬ ಸಂತೋಷವಾಯಿತು. ಹೇಗಾದರೂ ಸರಿ, ಸೀತಾದೇವಿಯನ್ನು ಹುಡುಕಿ ಶ್ರೀರಾಮನಿಗೆ ಒಪ್ಪಿಸಬೇಕೆಂದು ನಿರ್ಧರಿಸಿದರು. ಸೀತೆಯನ್ನು ಹುಡುಕಲು ದಿಕ್ಕುದಿಕ್ಕುಗಳಿಗೆ ಹೋದರು. ಲಂಕೆಗೆ ಸೇತುವೆಯನ್ನು ಕಟ್ಟಿದರು. ರಾವಣನ ಸೇನೆಯೊಡನೆ ಸೆಣಸಿ ಶ್ರೀರಾಮನಿಗೆ ವಿಜಯವನ್ನು ಗಳಿಸಿಕೊಟ್ಟರು. ಸೀತಾದೇವಿ ಮತ್ತು ಶ್ರೀರಾಮರು ಬಹಳ ಕಾಲದ ಅಗಲಿಕೆಯ ನಂತರ ಮತ್ತೆ ಒಂದುಗೂಡುವಂತೆ ಮಾಡಿದರು. ಹೀಗೆ ಶ್ರೀರಾಮನಿಗೆ ಕಷ್ಟಕಾಲದಲ್ಲಿ ಸಂಪೂರ್ಣ ಸಹಾಯ ದೊರಕಿದ್ದು ಕರ್ನಾಟಕದವರಿಂದ. ಸಮು



ದ್ರುಲಂಘನ ಮಾಡಿ ರಾವಣನ ತೇಜೋಭಂಗಮಾಡಿ ಸೀತಾದೇವಿಗೆ ಚೂಡಾಮಣಿಯನ್ನು ಕೊಟ್ಟು ಲಂಕೆಯನ್ನು ಸುಟ್ಟು ಹಾಹಾಕಾರ ಹುಟ್ಟಿಸಿದ ಶ್ರೀರಾಮದೂತ ಹನುಮಂತ ನಮ್ಮ ಕರ್ನಾಟಕದವನು.

ರಾಮಾಯಣದಲ್ಲಿ ಗೋಕರ್ಣಕ್ಷೇತ್ರದ ಪ್ರಸ್ತಾಪವೂ ಬರುತ್ತದೆ. ಅದನ್ನು ಪ್ರತ್ಯೇಕವಾಗಿ ತಿಳಿಸಲಾಗಿದೆ.

**ಮಹಾಭಾರತದಲ್ಲಿ :**

ಮಹಾಭಾರತದ ಕಥೆ ನಮಗೆಲ್ಲ ಗೊತ್ತೇ ಇದೆ. ಪಾಂಡವರು ದ್ರೌಪದಿಯನ್ನು ಮದುವೆಯಾದ ನಂತರ ಕೌರವರಿಂದ ಅರ್ಧ ರಾಜ್ಯವನ್ನು ಪಡೆದು ಇಂದ್ರಪ್ರಸ್ಥದಲ್ಲಿ ರಾಜ್ಯವಾಳತೊಡಗಿದರು. ಆಗ ಯುಧಿಷ್ಠಿರನು ರಾಜಸೂಯ

ಯಾಗವನ್ನು ಮಾಡಲು ನಿಶ್ಚಯಿಸಿದನು. ಯಾಗಕ್ಕಾಗಿ ಕಪ್ಪಕಾಣಿಕೆಗಳನ್ನು ವಸೂಲುಮಾಡುವ ಸಲುವಾಗಿ ತನ್ನ ತಮ್ಮಂದಿರನ್ನು ದೇಶದ ವಿವಿಧ ದಿಕ್ಕುಗಳಿಗೆ ಕಳುಹಿಸಿದನು. ಸಹದೇವನು ದಕ್ಷಿಣದ ಕಿಷ್ಕಿಂಧೆಗೆ ಬಂದಾಗ ಅದನ್ನು ಆಳುತ್ತಿದ್ದ ಮೈಂದ ಮತ್ತು ದ್ವಿವಿದರು ಅವನೊಡನೆ ಪರಾಕ್ರಮದಿಂದ ಹೋರಾಡಿದರು. ತಾವು ಯುದ್ಧದಲ್ಲಿ ಸೋಲದಿದ್ದರೂ 'ಯಾಗವು ನಿರ್ವಿಘ್ನವಾಗಿ ನೆರವೇರಲಿ' ಎಂದು ಧನಕನಕಗಳನ್ನು ಕೊಟ್ಟರು. ಈ ಕಿಷ್ಕಿಂಧೆಯೇ ಬಳ್ಳಾರಿ ಜಿಲ್ಲೆಯಲ್ಲಿರುವ ಆನೆಗೊಂದಿ ಎಂದು ಓದಿದ್ದೇವೆ.

ಅನಂತರ ರಾಜಸೂಯಯಾಗವು ನಿರ್ವಿಘ್ನವಾಗಿ ನಡೆಯಿತು. ಯಾಗದಲ್ಲಿ ವೈಜಯಂತಿಯ ರಾಜನು ಭಾಗವಹಿಸಿದ್ದನು. ವೈಜಯಂತಿ ಈಗಿನ ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಬನವಾಸಿ.

ಪಾಂಡವರು ವನವಾಸದ ನಂತರ ಒಂದು ವರ್ಷ ಅಜ್ಞಾತವಾಸವನ್ನು ಮತ್ಸ್ಯರಾಜ್ಯದ ರಾಜಧಾನಿಯಾದ ಮತ್ಸ್ಯನಗರಿಯಲ್ಲಿ ಕಳೆದರು. ಹೀಗೆ ಪಾಂಡವರಿಗೆ ಒಂದು ವರ್ಷ ಆಶ್ರಯವನ್ನು ಕೊಟ್ಟ ಮತ್ಸ್ಯನಗರಿ ನಮ್ಮ ಕರ್ನಾಟಕದಲ್ಲಿದೆ. ಧಾರವಾಡ ಜಿಲ್ಲೆಯ ಹಾನಗಲ್ಲೇ ಈ ಮತ್ಸ್ಯನಗರಿ.

ಅರ್ಜುನನು ತೀರ್ಥಯಾತ್ರೆಯನ್ನು ಕೈಗೊಂಡಾಗ ಕರ್ನಾಟಕದ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿದನು.

ತಂ ದೃಷ್ಟ್ವಾ ಪಾಂಡವೋ ರಾಜನ್ ಗೋಕರ್ಣ ಮಭಿತೋऽಗಮತ್ ।
ಆದ್ಯಂ ಪಶುಪತೇಃ ಸ್ಥಾನಂ ದರ್ಶನಾದೇವ ಮುಕ್ತಿದಂ ।
ಯತ್ರ ಪಾಪೋಪಿ ಮನುಜಃ ಪ್ರಾಪ್ನೋತ್ಯಭಯದಂ ಪದಮ್ ।
ಸಮುದ್ರೇ ಪಶ್ಚಿಮೇ ಯಾನಿ ತೀರ್ಥಾನ್ಯಾಯತನಾನಿ ಚ ।
ತಾನಿ ಸರ್ವಾಣಿ ಗತ್ವಾ ಸ ಪ್ರಭಾಸಮುಪಜಗ್ಮಿವಾನ್ ॥

"(ಅರ್ಜುನನು) ಗೋಕರ್ಣಕ್ಷೇತ್ರಕ್ಕೆ ಪ್ರಯಾಣ ಮಾಡಿ ಪಾಪಪರಿಹಾರಕನಾದ ಪಶುಪತಿಯನ್ನು ದರ್ಶನ ಮಾಡಿದನು. ಮುಂದೆ ಪಶ್ಚಿಮ ಸಮುದ್ರ ತೀರಪ್ರದೇಶಗಳಲ್ಲಿದ್ದ ಪುಣ್ಯಕ್ಷೇತ್ರಗಳನ್ನೂ ತೀರ್ಥಗಳನ್ನೂ ದೇವಾಲಯಗಳನ್ನೂ ಸಂದರ್ಶಿಸಿದನು.

(ಮಹಾಭಾರತ, ಆದಿಪರ್ವ)

ಪುಲಸ್ತ್ಯರು ಭೀಷ್ಮನಿಗೆ ನಾನಾ ಕ್ಷೇತ್ರಗಳಲ್ಲಿ ಮಹಿಮೆಯನ್ನು ವಿವರಿಸಿರುವರು.

ಮತಂಗಸ್ಯಾಶ್ರಮಸ್ತತ್ರ ಮಹರ್ಷೇರ್ಭಾವಿತಾತ್ಮನಃ ।
ತಂ ಪ್ರವಿಶ್ಯಾಶ್ರಮಂ ಶ್ರೀಮಚ್ಛ್ರಮಶೋಕವಿನಾಶನಮ್ ॥

"ಸಮೀಪದಲ್ಲಿಯೇ ಜಿತೇಂದ್ರಿಯರಾದ ಮಹರ್ಷಿ ಮತಂಗರ ಆಶ್ರಮ ವಿದೆ. ಆಶ್ರಮವು ಶ್ರಮ ಮತ್ತು ಶೋಕಗಳನ್ನು ಪರಿಹರಿಸುವುದು."

(ಮಹಾಭಾರತ, ವನಪರ್ವ)

ಈ ಮತಂಗಾಶ್ರಮವು ಕರ್ನಾಟಕದಲ್ಲಿದೆ. ಶ್ರೀರಾಮನನ್ನು ಆದರಿಸಿ ಉಪಚರಿಸಿದ ಶಬರಿಯು ಈ ಆಶ್ರಮದಲ್ಲಿಯೇ ಇದ್ದಳು.

ತತಃ ಶೂರ್ಪಾರಕಂ ಗಚ್ಛೇಜ್ಜಾಮದಗ್ನ್ಯನಿಷೇವಿತಮ್ ।
ರಾಮತೀರ್ಥೇ ನರಃ ಸ್ನಾತ್ವಾ ವಿಸ್ಯಾದ್ಬಹುಸುವರ್ಣಕಮ್ ॥

"ಅಲ್ಲಿಂದ ಪರಶುರಾಮನ ಆಶ್ರಮ ಭೂಮಿಯಾಗಿದ್ದ ಶೂರ್ಪಾರಕ ಕ್ಷೇತ್ರಕ್ಕೆ ಪಯಣ ಮಾಡಬೇಕು. ಅಲ್ಲಿರುವ ರಾಮತೀರ್ಥದಲ್ಲಿ ಸ್ನಾನಮಾಡಿದರೆ ಸುವರ್ಣವನ್ನು ದಾನಮಾಡಿದ ಫಲವು ಲಭಿಸುತ್ತದೆ."

(ಮಹಾಭಾರತ, ವನಪರ್ವ)

ಈ ಶೂರ್ಪಾರಕ ಆಶ್ರಮವು ಕರ್ನಾಟಕದಲ್ಲಿದೆಯೆಂಬುದನ್ನು ಮುಂದೆ 'ಪರಶುರಾಮಕ್ಷೇತ್ರ'ದಲ್ಲಿ ಓದುವಿರಿ.

ಮಹಾಭಾರತದಲ್ಲಿ ಕಾವೇರಿನದಿ ಮತ್ತು ಗೋಕರ್ಣ ಕ್ಷೇತ್ರಗಳ ಮಹಿಮಾವರ್ಣನೆ ಇದೆ. ಅದನ್ನು ಮುಂದೆ ತಿಳಿಸಲಾಗಿದೆ.

**ಪರಶುರಾಮ ಕ್ಷೇತ್ರ :**

ಪರಶುರಾಮನು ಮಹಾವಿಷ್ಣುವಿನ ಅವತಾರ. ಇವನಿಗೆ ಭಾರ್ಗವರಾಮ ಎಂಬ ಹೆಸರೂ ಇತ್ತು. ನಮ್ಮ ಕರ್ನಾಟಕಕ್ಕೂ ಪರಶುರಾಮನಿಗೂ ನಿಕಟವಾದ ಸಂಬಂಧವಿದೆ. ಕನ್ನಡ ನಾಡಿನ ಒಂದು ದೊಡ್ಡ ಭಾಗವನ್ನು ಪರಶುರಾಮಕ್ಷೇತ್ರ ಎಂದು ಕರೆಯುತ್ತೇವೆ. ಹಿರೇಮಗಳೂರಿಗೆ ಹಿಂದೆ ಭಾರ್ಗವಪುರ ಎಂಬ ಹೆಸರಿತ್ತು.

ಪರಶುರಾಮನ ತಂದೆಯಾದ ಜಮದಗ್ನಿಯ ಬಳಿ 'ಸುರಭಿ' ಎಂಬ ಕಾಮಧೇನು ಇದ್ದಿತು. ಒಮ್ಮೆ ಕಾರ್ತವೀರ್ಯಾರ್ಜುನನೆಂಬ ರಾಜನು ಈ ಗೋವನ್ನು ಕದ್ದುಕೊಂಡು ಹೋದನು. ಇದರಿಂದ ಕೋಪಗೊಂಡ ಪರಶುರಾಮನು ಕಾರ್ತವೀರ್ಯಾರ್ಜುನನ ಬೆನ್ನಟ್ಟಿ ಅವನನ್ನು ಕೊಂದು ಸುರಭಿ

ಯನ್ನು ತಂದೆಗೆ ಒಪ್ಪಿಸಿದನು. ಕಾರ್ತವೀರ್ಯಾರ್ಜುನನು ಮರಣಹೊಂದಿದ ಸ್ಥಳವೇ ಕೋಲಾರ.

ಕಾರ್ತವೀರ್ಯಾರ್ಜುನನ ಮಕ್ಕಳು ತಂದೆಯ ಮರಣದಿಂದ ಕೋಪಗೊಂಡರು. ಜಮದಗ್ನಿಯು ತಪಸ್ಸು ಮಾಡುತ್ತಿದ್ದ ಶಯ್ಯಾಗಾರಕ್ಕೆ ಬಂದು ಆ ಮಹರ್ಷಿಯ ತಲೆಯನ್ನು ಕತ್ತರಿಸಿ ಹಾಕಿದರು. ಆ ಸ್ಥಳ ಪರ್ವತವೂ ಕೋಲಾರ ಜಿಲ್ಲೆಯಲ್ಲಿದೆ.



ಕ್ಷತ್ರಿಯರಿಂದ ತನ್ನ ತಂದೆಯು ಹತ್ಯೆಯಾದುದರಿಂದ ಪರಶುರಾಮನಿಗೆ ಇಡೀ ಕ್ಷತ್ರಿಯ ಕುಲದ ಮೇಲೆ ದ್ವೇಷ ಹುಟ್ಟಿತು. ಕ್ಷತ್ರಿಯರ ಕುಲವನ್ನೇ ನಾಶಮಾಡುವುದಾಗಿ ಶಪಥತೊಟ್ಟನು. ಇಪ್ಪತ್ತೊಂದು ಬಾರಿ ಭೂಮಂಡಲದ ಮೇಲಿನ ಕ್ಷತ್ರಿಯರನ್ನು ಸಂಹರಿಸಿದನು. ಅನಂತರ ಯಜ್ಞವೊಂದನ್ನು ಮಾಡಿ ತಾನು ಕ್ಷತ್ರಿಯರಿಂದ ಗೆದ್ದುಕೊಂಡಿದ್ದ ಸಮಸ್ತ ಭೂಮಿಯನ್ನು ಬ್ರಾಹ್ಮಣರಿಗೆ ದಾನಮಾಡಿಬಿಟ್ಟನು. ಅನಂತರ ಮಹೇಂದ್ರಪರ್ವತಕ್ಕೆ ಹೋಗಿ ತಪಸ್ಸಿಗೆ ತೊಡಗಿದನು.

ಇದೇ ಸಮಯದಲ್ಲಿ ಸಗರನೆಂಬ ರಾಜನು ಅಯೋಧ್ಯೆಯನ್ನು ಪಾಲಿಸುತ್ತಿದ್ದನು. ಒಮ್ಮೆ ಅವನು ಅಶ್ವಮೇಧಯಾಗವನ್ನು ಮಾಡಬೇಕೆಂದು ನಿರ್ಧರಿಸಿದನು. ಈ ಯಾಗವನ್ನು ಮಾಡಬೇಕಾದರೆ ಇಡೀ ಭೂಮಂಡಲವನ್ನೇ ಜಯಿಸಿರಬೇಕು. ಆದಕ್ಕಾಗಿ ಸಗರನು ದಿಗ್ವಿಜಯ ಮಾಡಲು ತನ್ನ ಸೈನ್ಯವನ್ನೂ ಯಾಗದ ಕುದುರೆಯನ್ನೂ ಕಳುಹಿಸಿದನು. ಸಗರನು ಯಾಗಮಾಡುವ ಸಂಗತಿಯನ್ನು ತಿಳಿದು ದೇವತೆಗಳಿಗೆ ಗಾಬರಿಯಾಯಿತು. ಅಶ್ವಮೇಧಯಾಗದಿಂದ ಸಗರನು ತುಂಬ ಪ್ರಬಲನಾಗುವನೆಂಬ ಹೆದರಿಕೆಯಿಂದ ಯಾಗದ ಕುದುರೆಯನ್ನು ಬಚ್ಚಿಟ್ಟುಬಿಟ್ಟರು, ಕುದುರೆಯೇ ಇಲ್ಲದೆ ಯಾಗ ನಡೆಯುವ ಹಾಗಿಲ್ಲವಲ್ಲ !

ಸಗರನಿಗೆ ತುಂಬ ಚಿಂತೆಯಾಯಿತು. ಅವನು ತನ್ನ ಮಕ್ಕಳನ್ನು ಕರೆದು ಯಾಗದ ಕುದುರೆಯನ್ನು ಹುಡುಕಿ ತರುವಂತೆ ಹೇಳಿದ. ಅವರು ತಂದೆಯ ಆಣತಿಯಂತೆ ಕುದುರೆಯನ್ನು ಅರಸುತ್ತ ಹೊರಟರು. ಎಲ್ಲ ಕಡೆಯೂ ಹುಡುಕಾಡಿದರು. ಕುದುರೆಯು ಸಿಗಲೇ ಇಲ್ಲ. ಕೊನೆಗೆ ಅವರು ಭೂಮಿಯನ್ನು ಅಗೆಯಲಾರಂಭಿಸಿದರು. ಇದರಿಂದ ಭೂಮಿಯೊಳಗೆ ಸಮುದ್ರವು ನುಗ್ಗಿತು. ಅನೇಕ ತೀರ್ಥಕ್ಷೇತ್ರಗಳು, ಅರಣ್ಯಗಳಿಂದ ಕೂಡಿದ ಭೂಮಿಯಲ್ಲಿ ಸಮುದ್ರವು ತನ್ನ ಜಲರಾಶಿಯನ್ನು ನುಗ್ಗಿಸಿತು. ಹೀಗೆ ಮುಳಗಿಹೋದ ಕ್ಷೇತ್ರಗಳಲ್ಲಿ ಗೋಕರ್ಣವೂ ಒಂದು.

ಸಮುದ್ರೋಪಾಂತವರ್ತೀನಿ ಕ್ಷೇತ್ರಾಣಿ ಚ ಸಮಂತತಃ ।
ಇತಸ್ತತಃ ಪ್ರಯಾತಾಶ್ಚ ಜನಾಸ್ತನ್ನಿಲಯಾ ನೃಪ ॥
ಗೋಕರ್ಣಮಿತಿ ಚ ಕ್ಷೇತ್ರಂ ಪೂರ್ವಂಪ್ರೋಕ್ತಂ ತು ಯತ್ತ್ವಯ
ಅರ್ಣವೋಪಾಂತವರ್ತಿತ್ವಾತ್ ಸಮುದ್ರೇಂತರ್ಧಿಮಾಗಮತ್ ॥

"ಸುತ್ತಮುತ್ತಲೂ ಇದ್ದ ಸಮುದ್ರ ಪ್ರಾಂತ ಪ್ರದೇಶದ ಅನೇಕ ಕ್ಷೇತ್ರಗಳು ಮುಳುಗಿಹೋದವು. ಆಗ ಅಲ್ಲಿ ವಾಸಮಾಡಿದ್ದ ಜನರು ಬೇರೆ ಬೇರೆ ಸ್ಥಳಗಳಿಗೆ ಹೋದರು, ಸಮುದ್ರ ಸಮೀಪದಲ್ಲಿದ್ದ ಗೋಕರ್ಣ ಮಹಾಕ್ಷೇತ್ರವೂ ಸಮುದ್ರದಲ್ಲಿ ಮುಳುಗಿ ಅದೃಶ್ಯವಾಯಿತು.

(ಬ್ರಹಾಂಡ ಪುರಾಣ)

ಗೋಕರ್ಣದಲ್ಲಿದ್ದ ಮುನಿಗಳಿಗೆ ಆಸರೆ ತಪ್ಪಿ ಅವರೆಲ್ಲ ಮಹೇಂದ್ರಪರ್ವ



ಕೊಂಡು ಗಿರ್ರನೆ ತಿರುಗಿಸುತ್ತ, ಅತಿ ವೇಗದಿಂದ ಅದನ್ನು ಸಮುದ್ರದೆಡೆಗೆ ಎಸೆದನು. "ಈ ಕೊಡಲಿಯು ಬಿದ್ದ ಸ್ಥಳವೆ ಅಳತೆಗೋಲಾಗಿ, ಸಮುದ್ರವು ಇಲ್ಲಿಂದಾಚೆಗೆ ಸರಿಯಲಿ" ಎಂದನು. ಕೂಡಲೇ ಸಮುದ್ರವು ಹಿಂದಹಿಂದಕ್ಕೆ ಸರಿದು ಕೊಡಲಿ ಬಿದ್ದ ಸ್ಥಳದವರೆಗೆ ಭೂಮಿಯನ್ನು ಮೇಲೆತ್ತಿ ಪರಶುರಾಮನಿಗೆ ಒಪ್ಪಿಸಿತು. ಸಮುದ್ರವು ಹಿಂದೆ ಸರಿಯುತ್ತಿದ್ದಂತೆ ಮುಳುಗಿಹೋಗಿದ್ದ ಭೂಭಾಗಗಳು ಒಂದೊಂದಾಗಿ ಕಾಣಿಸಿಕೊಂಡವು. ಗೋಕರ್ಣ ಕ್ಷೇತ್ರವೂ ತಲೆಯೆತ್ತಿತು. ಪರಶುರಾಮನು ಅಲ್ಲಿ ಶೂರ್ಪಾರಕ ಆಶ್ರಮವನ್ನು ಕಟ್ಟಿಕೊಂಡು ತಪಸ್ಸಿಗೆ ತೊಡಗಿದನು.

ಅಂತರ್ಹಿತೇ ಪರಿಸ್ನಾಥೇ ರಾಮಃ ಸ್ರುವಮುದ್ಯಮ್ಯಯಃ ।
ಭ್ರಾಮಯಿತ್ವಾತಿವೇಗೇಗ ಚಿಕ್ಷೇಪ ಲವಣಾರ್ಣವೇ ॥
ಕ್ಷಿಪ್ತತ್ವೇನ ಸಮುದ್ರೇ ತು ದಿಶಮುತ್ತರಪಶ್ಚಿಮಾಮ್
ಗತ್ವಾ ಸ್ರುವೋಽಪತದ್ರಾಜನ್ ಯೋಜನಾನಾಂ ಶತದ್ವಯಂ ॥
ಉತ್ಸಾರಯಿತ್ವಾ ಸಲಿಲಂ ಸಮುದ್ರಸ್ತ್ವಾಪದಾತ್ಮನಃ
ಅತಿಷ್ಠದಪಸೃತ್ಯೋರ್ವೀಂ ದತ್ವಾ ರಾಮಾಯಾ ಪಾರ್ಥಿವ ॥

"ಆಗ ಭಾರ್ಗವರಾಮನು ಉತ್ತರ ದಿಕ್ಕಿಗೆ ಅಭಿಮುಖವಾಗಿ ನಿಂತುಕೊಂಡು ಅತಿ ವೇಗದಿಂದ ಕೊಡಲಿಯನ್ನು ತಿರುಗಿಸಿ ಅದನ್ನು ಲವಣಸಮುದ್ರದಲ್ಲಿ ಎಸೆದನು.ರಾಜನೇ,ಸಮುದ್ರಕ್ಕೆ ಎಸೆಯಲ್ಪಟ್ಟ ಆ ಕೊಡಲಿಯು ಪಶ್ಚಿಮ ಉತ್ತರ ದಿಕ್ಕುಗಳಲ್ಲಿ ಎರಡುನೂರು ಯೋಜನಗಳಷ್ಟು ದೂರಕ್ಕೆ ಹೋಗಿ ನೀರಿನಲ್ಲಿ ಬಿದ್ದಿತು, ಸಮುದ್ರವು ತನ್ನ ಜಲರಾಶಿಯನ್ನು ಹಿಂದಕ್ಕೆ ಸೆಳೆದುಕೊಂಡು ಭೂಮಿಯನ್ನು ಮೇಲಕ್ಕೆ ಎತ್ತಿ ಅದನ್ನು ಭಾರ್ಗವನಿಗೆ ಒಪ್ಪಿಸಿ ತನ್ನ ಸ್ಥಾನದಲ್ಲಿ ನಿಂತಿತು."

(ಬ್ರಹಾಂಡ ಪುರಾಣ)

ತತೋ ರಾಮಾಜ್ಞಯಾ ಸೋಽಪಿ ಗೋಕರ್ಣೋದಕಮಾಹರತ್ ।
ರಾಮೋಽಪಿ ತಂ ಸಮಭ್ಯರ್ಚ್ಯ ಗೋಕರ್ಣಂ ನಾಮ ಶಂಕರಂ ॥

"ವರುಣನು, ಪರಶುರಾಮನ ಅಪ್ಪಣೆಯ ಮೇರೆಗೆ ಗೋಕರ್ಣದಲ್ಲಿದ್ದ ನೀರನ್ನು ಪರಿಹರಿಸಿದನು; ರಾಮನು ಸಹ ಆ ಗೋಕರ್ಣೇಶ್ವರನನ್ನು ಪೂಜಿಸಿದನು.

(ನಾರದೀಯ ಪುರಾಣ)

ಪರಶುರಾಮ ಕ್ಷೇತ್ರವಾದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಬ್ರಹ್ಮಣ್ಯ ಕ್ಷೇತ್ರವಿದೆ. ಹಿಂದೆ ನಮ್ಮ ಭೂಮಿಯನ್ನು ಮಹಾಶೇಷನು ಹೊತ್ತಿದ್ದನು. ಒಮ್ಮೆ ಅವನು ಮಹಾವಿಷ್ಣುವನ್ನು ಕುರಿತು "ಸ್ವಾಮಿ, ನಾನು ಈವರೆಗೆ ಭೂಮಿಯ ಭಾರವನ್ನು ಹೊತ್ತು ಬಳಲಿದ್ದೇನೆ. ಸ್ವಲ್ಪ ಕಾಲ ಈ ಭಾರವನ್ನು ಕಳಚಿಕೊಂಡು ಭೂಮಂಡಲವನ್ನು ಸುತ್ತಬೇಕೆಂದಿದ್ದೇನೆ" ಎಂದನು. ವಿಷ್ಣುವು "ನಾನು ಕೂರ್ಮ (ಆಮೆ) ರೂಪವನ್ನು ತಾಳಿ ಭೂಮಿಯನ್ನು ಹೊತ್ತು ಕಾಪಾಡುವೆನು. ನೀನು ಭೂಪರ್ಯಟನೆಮಾಡಿ ಬಾ" ಎಂದು ಹೇಳಿ ಕೂರ್ಮಾವತಾರವನ್ನು ತಾಳಿದನು. ಆದಿಶೇಷನ ಸ್ಥಾನದಲ್ಲಿ ತಾನೇ ನಿಂತು

ಭೂಭಾರವನ್ನು ಹೊತ್ತನು. ಶೇಷನು ಭೂಮಂಡಲವನ್ನು ಸುತ್ತಾಡಿ ಒಂದು ಪರ್ವತಕ್ಕೆ ಬಂದು ನೆಲಸಿದನು. ಪಾರ್ವತಿದೇವಿಯು ಪುತ್ರನನ್ನು ಪಡೆಯುವ ಅಪೇಕ್ಷೆಯಿಂದ ಆ ಪರ್ವತಕ್ಕೆ ಬಂದಳು. ಅಲ್ಲಿ ತಪಸ್ಸು ಮಾಡುತ್ತಿದ್ದ ಆದಿ ಶೇಷನನ್ನು ಆರಾಧಿಸಿದಳು. ಅವಳ ಭಕ್ತಿಯಿಂದ ಪ್ರೀತನಾದ ಶೇಷನು ತಾನೇ ಅವಳ ಪುತ್ರನಾಗಿ ಜನಿಸುವೆನೆಂಬ ವರವನ್ನು ಕೊಟ್ಟನು. ಕಾಲಕ್ರಮದಲ್ಲಿ ಪಾರ್ವತಿಗೆ ಮಗನೊಬ್ಬ ಜನಿಸಿದ. ಅವನೇ ಸುಬ್ರಹ್ಮಣ್ಯ.

ಕೆಲಕಾಲದ ನಂತರ ಆ ಪಾರ್ವತಿಕುಮಾರನು ಶಿವಪಾರ್ವತಿಯರಿಗೆ ವಂದಿಸಿ ಅವರ ಅಪ್ಪಣೆಯನ್ನು ಪಡೆದು ತಪಸ್ಸಿಗಾಗಿ ಹೊರಟನು. ಪರಶು ರಾಮ ಕ್ಷೇತ್ರದಲ್ಲಿ ಒಂದು ಬೆಟ್ಟಕ್ಕೆ ಬಂದು ಅಲ್ಲಿ ತಪಸ್ಸು ಮಾಡಿದನು. ಕುಮಾರನು ಆ ಬೆಟ್ಟದಲ್ಲಿ ತಪಸ್ಸು ಮಾಡಿದ್ದರಿಂದ ಅದಕ್ಕೆ ಕುಮಾರಪರ್ವತ ವೆಂದು ಹೆಸರು ಬಂದಿತು. ಆ ಕ್ಷೇತ್ರವು ಸುಬ್ರಹ್ಮಣ್ಯಕ್ಷೇತ್ರ ಎನಿಸಿಕೊಂಡಿತು. ಇಲ್ಲಿ ಕುಮಾರಧಾರೆ ಎಂಬ ನದಿಯು ಹುಟ್ಟುತ್ತದೆ.

ತತ್ರ ಸ್ನಾತ್ವಾ ತಪಶ್ಚಕ್ರೇತನಂತರೂಪಂ ಚ ಸಂಸ್ಥಿತಮ್ ।
ಕುಮಾರಪರ್ವತಶ್ಚೇತಿ ವಿಖ್ಯಾತಶ್ಚ ಸ ಭೂಧರಃ ।
ಕುಮಾರಧಾರಾ ವಿಖ್ಯಾತಾ ಯಸ್ಮಾತ್ಸಾ ಸರಿದುದ್ಗತಾ ॥

"ಕುಮಾರನು ಆ ಬೆಟ್ಟದಲ್ಲಿ ತಪಸ್ಸು ಮಾಡಿದುದ್ಧರಿಂದ ಅದು ಕುಮಾರ ಪರ್ವತವೆಂದು ಪ್ರಸಿದ್ಧವಾಯಿತು. ಆ ತಪಸ್ಸಿನ ಸ್ಥಳದಿಂದ ಹೊರಟ ನದಿಯು ಕುಮಾರಧಾರೆಯೆಂದು ಪ್ರಖ್ಯಾತವಾಯಿತು."

(ಸ್ಕಾಂದ ಪುರಾಣ)

ಪ್ರಹ್ಲಾದನು ತೀರ್ಥಯಾತ್ರೆಯನ್ನು ಕೈಗೊಂಡಿದ್ದಾಗ ಈ ಕ್ಷೇತ್ರಕ್ಕೆ ಬಂದಿದ್ದನು.

ಕುಮಾರಧಾರಾಮಭ್ಯೇತ್ಯದ ದರ್ಶೆ ಸ್ವಾಮಿನಂ ವಶೀ ।
ದೃಷ್ಟ್ವಾ ಸ್ಕಂದಂ ಸಮಭ್ಯರ್ಚ್ಯ ನರ್ಮದಾಯಾಂ ಜಗಾಮ ಹ ॥

"(ಪ್ರಹ್ಲಾದನು) ಕುಮಾರಧಾರಾ ಎಂಬ ಕ್ಷೇತ್ರಕ್ಕೆ ಹೋಗಿ ಷಣ್ಮುಖ ನನ್ನು ದರ್ಶನ ಮಾಡಿದನು. ಆ ಸ್ಕಂದನನ್ನು ಭಕ್ತಿಯಿಂದ ಸೇವಿಸಿ ಅಲ್ಲಿಂದ ನರ್ಮದಾ ನದಿಗೆ ಹೋದನು."

(ವಾಮನ ಪುರಾಣ)

ತೀರ್ಥಯಾತ್ರೆಯ ಸಂದರ್ಭದಲ್ಲಿ ಅರ್ಜುನನೂ ಇಲ್ಲಿಗೆ ಬಂದಿದ್ದನು.

**ಭೂಕೈಲಾಸ–ಗೋಕರ್ಣ :**

ಸಮುದ್ರದಲ್ಲಿ ಮುಳುಗಿಹೋಗಿದ್ದ ಗೋಕರ್ಣವು ಪರಶುರಾಮನ ಮಹಿಮೆಯಿಂದ ಮತ್ತೆ ಮೇಲೆದ್ದಿತಲ್ಲವೆ? ಈ ಗೋಕರ್ಣವು ಪರಶುರಾಮಕ್ಷೇತ್ರವಾದ ಉತ್ತರ ಕನ್ನಡ ಜಿಲ್ಲೆಯಲ್ಲಿದೆ. ಇದು ತುಂಬ ಪವಿತ್ರವಾದ ಕ್ಷೇತ್ರ.

ಯತ್ರ ದೇವೈಸ್ತಪಸ್ತಪ್ತಂ ಮಹದಿಚ್ಛದ್ಭಿರಾಶ್ರಮೇ
ಗೋಕರ್ಣಮಿತಿ ವಿಖ್ಯಾತಂ ತ್ರಿಷು ಲೋಕೇಷು ಭಾರತ ॥

"ಯಾವ ಆಶ್ರಮದಲ್ಲಿ ದೇವತೆಗಳು ಮಹತ್ವಾಕಾಂಕ್ಷೆಯುಳ್ಳವರಾಗಿ ತಪಸ್ಸನ್ನು ಮಾಡಿದರೋ ಆ ಸ್ಥಳವು ಗೋಕರ್ಣವೆಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಯಿತು."

(ಮಹಾಭಾರತ, ವನಪರ್ವ)

ವರಾಹ ಪುರಾಣದಲ್ಲಿ ಗೋಕರ್ಣದ ಬಗ್ಗೆ ಒಂದು ಕಥೆ ಇದೆ. ಒಮ್ಮೆ ಪರಮೇಶ್ವರನು ಜಿಂಕೆಯ ರೂಪವನ್ನು ಧರಿಸಿ ಶ್ಲೇಷ್ಮಾತಕಪರ್ವತದಲ್ಲಿ ವಿಹರಿಸುತ್ತಿದ್ದನು. ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳು ಶಿವನನ್ನು ಹುಡುಕಿಕೊಂಡು ಆ ಪರ್ವತಕ್ಕೆ ಬಂದರು. ಜಿಂಕೆಯ ರೂಪದಲ್ಲಿದ್ದ ಶಿವನನ್ನು ಹಿಡಿಯಲು ಯತ್ನಿಸಿದರು. ಜಿಂಕೆಯು ಅವರಿಗೆ ಸಿಗದೆ ತಪ್ಪಿಸಿಕೊಂಡು ಹೋಯಿತು. ಆದರೆ ಅದರ ಕೊಂಬು ಮಾತ್ರ ಮೂರು ಚೂರಾಗಿ ಮುರಿದು ಬ್ರಹ್ಮ, ವಿಷ್ಣು ಮತ್ತು ಇಂದ್ರರ ಕೈಗೆ ಒಂದೊಂದು ಚೂರು ಸಿಕ್ಕಿತು. ಮೂವರೂ ಶಿವನನ್ನು ಧ್ಯಾನಿಸುತ್ತ ತಮಗೆ ಸಿಕ್ಕಿದ ಕೊಂಬಿನ ಚೂರುಗಳನ್ನು ತೆಗೆದುಕೊಂಡು ಬೇರೆ ಬೇರೆ ದಿಕ್ಕುಗಳಿಗೆ ಹೋದರು. ಕೊಂಬಿನ ಚೂರುಗಳನ್ನು ಬ್ರಹ್ಮನು ಉತ್ತರ ಗೋಕರ್ಣದಲ್ಲಿಯೂ ವಿಷ್ಣುವು ಶೃಂಗೇಶ್ವರದಲ್ಲಿಯೂ ಇಂದ್ರನು ಸ್ವರ್ಗದಲ್ಲಿಯೂ ಸ್ಥಾಪಿಸಿದರು.

ಲಂಕೆಯ ಅರಸನಾದ ರಾವಣನು ಒಮ್ಮೆ ಉತ್ತರ ಗೋಕರ್ಣದಲ್ಲಿ ಶಿವನನ್ನು ಕುರಿತು ತಪಸ್ಸುಮಾಡಿ ಮೂರು ಲೋಕಗಳನ್ನೂ ಜಯಿಸುವ ವರವನ್ನು ಪಡೆದನು. ಅನಂತರ ಅವನು ಸ್ವರ್ಗಕ್ಕೆ ಹೋಗಿ ಇಂದ್ರನನ್ನು ಸೋಲಿಸಿದನು. ಇಂದ್ರನು ಅಲ್ಲಿ ನೆಡಿಸಿದ್ದ ಜಿಂಕೆಯ ಕೊಂಬಿನ ಚೂರನ್ನು ಕಿತ್ತು ತಂದನು. ದಾರಿಯಲ್ಲಿ ಬರುತ್ತಿರುವಾಗ ಅದನ್ನು ಪಶ್ಚಿಮ ಸಮುದ್ರ ತೀರದಲಿಟ್ಟು ಸಂಧ್ಯಾವಂದನೆಯನ್ನು ಆಚರಿಸಿದನು. ಆಗ ಅದು ಭೂಮಿಯಲ್ಲಿ



ಗೋಕರ್ಣದ ಮಹಾಬಲೇಶ್ವರ ದೇವಸ್ಥಾನ

ನಾಟಿಕೊಂಡಿತು. ರಾವಣನು ಎಷ್ಟು ಪ್ರಯತ್ನಪಟ್ಟರೂ ಅದನ್ನು ಕೀಳಲಾಗ ಲಿಲ್ಲ. ಹತಾಶನಾಗಿ ಲಂಕೆಗೆ ಹಿಂದಿರುಗಿದನು. ಹೀಗೆ ಶೃಂಗವು (ಕೋಡು) ತಾನಾಗಿ ನೆಲಸಿದ ಸ್ಥಳವೇ ಧಕ್ಷಿಣ ಗೋಕರ್ಣಕ್ಷೇತ್ರವೆನಿಸಿದೆ.

ಏತತ್ತೇ ಕಥಿತಂ ಸರ್ವಂ ಮಯಾ ವಿಸ್ತರತೋ ಮುನೇ
ಯಥಾವದುತ್ತರಸ್ಥಸ್ಯ ಗೋಕರ್ಣಸ್ಯ ಮಹಾತ್ಮನಃ ॥

"ಶೃಂಗವು ತಾನಾಗಿ ನೆಲಸಿದ್ದ ಆ ಕ್ಷೇತ್ರವೇ ದಕ್ಷಿಣ ಗೋಕರ್ಣವೆನಿಸಿದೆ. ಭೂತಪತಿಯಾದ ಶಿವನು ಅಲ್ಲಿ ತಾನಾಗಿ ಪ್ರತಿಷ್ಠಿತನಾದನು."

(ವರಾಹ ಮಹಾಪುರಾಣ)

ಗೋಕರ್ಣ ಇರುವ ಪಶ್ಚಿಮ ಸಮುದ್ರದ ಕಡಲತೀರ ಹಸುವಿನ ಕಿವಿಯಂತೆಯೇ ಇದೆ. ಈ ಬಗ್ಗೆಯೂ ಒಂದು ಕಥೆ ಇದೆ. ಒಮ್ಮೆ ರುದ್ರನು ಸೃಷ್ಟಿಗಾಗಿ ಪಾತಾಳದಲ್ಲಿ ತಪಸ್ಸು ಮಾಡುತ್ತಿದ್ದ. ಆದರೆ ರುದ್ರನಿಗಿಂತ



ಮೊದಲು ಬ್ರಹ್ಮನೇ ಬ್ರಹ್ಮಾಂಡವನ್ನು ಸೃಷ್ಟಿಸಿಬಿಟ್ಟ. ಇದರಿಂದ ಪಾತಾಳವು ಮುಚ್ಚಿಹೋಯಿತು. ರುದ್ರನಿಗೆ ಹೊರಗೆ ಬರಲು ಅವಕಾಶವೇ ಇಲ್ಲದೆ ಅವನಿಗೆ ಕೋಪಬಂದಿತು. ಅವನು ಭೂಮಿಯನ್ನು ಸೀಳಿ ಹೊರಗೆ ಬರಲು ತವಕಿಸಿದ. ಆಗ ಭೂದೇವಿಯು ತಾನು ಗೋವಿನ ರೂಪವನ್ನು ಧರಿಸುವುದಾಗಿಯೂ ರುದ್ರನು ಸೂಕ್ಷ್ಮರೂಪವನ್ನು ಧರಿಸಿ ತನ್ನ ಕಿವಿಗಳ (ಕರ್ಣಗಳ) ಮೂಲಕ ಹೊರಗೆ ಬರಬೇಕೆಂದೂ ಪ್ರಾರ್ಥಿಸಿಕೊಂಡಳು. ಹೀಗೆ ರುದ್ರನು ಗೋವಿನ ಕರ್ಣಗಳಿಂದ ಬಂದ ಸ್ಥಳ ಗೋಕರ್ಣ.

ಗೋಕರ್ಣದ ಇನ್ನೊಂದು ಕಥೆ ಸಾಮಾನ್ಯವಾಗಿ ಎಲ್ಲರಿಗೂ ತಿಳಿದೇ ಇದೆ. ರಾವಣನ ತಾಯಿಯಾದ ಕೈಕಸಿಯು ಪ್ರತಿದಿನ ಶಿವಲಿಂಗವೊಂದನ್ನು ಪೂಜಿಸುತ್ತಿದ್ದಳು. ಒಂದು ದಿನ ಆ ಲಿಂಗವು ಸಮುದ್ರದ ಅಲೆಗಳಲ್ಲಿ ಕೊಚ್ಚಿ ಹೋಗಲು ಅವಳು ತುಂಬ ದುಃಖಿತಳಾದಳು. ಆಗ ರಾವಣನು ಅಮ್ಮಾ, ದುಃಖಿಸಬೇಡ. ನಾನು ಪರಮೇಶ್ವರನ ಆತ್ಮಲಿಂಗವನ್ನೇ ತರುವೆನು–ಎಂದು ಪರ್ವತವೊಂದಕ್ಕೆ ಹೋಗಿ ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವನು ಅವನ ತಪಸ್ಸಿಗೆ ಮೆಚ್ಚಿ ತನ್ನ ಆತ್ಮಲಿಂಗವನ್ನು ಅನುಗ್ರಹಿಸಿದನು. ''ಆತ್ಮಲಿಂಗವನ್ನು ದಾರಿಯಲ್ಲಿ ಎಲ್ಲಿಯೂ ಇಡಬೇಡ. ನೀನು ಅದನ್ನು ಎಲ್ಲಿಟ್ಟರೆ ಅಲ್ಲೇ ಅದು ಪ್ರತಿಷ್ಠವಾಗಿಬಿಡುವುದು' ಎಂದು ತಿಳಿಸಿದನು. ರಾವಣನು ಆತ್ಮಲಿಂಗವನ್ನು ವಸ್ತ್ರದಲ್ಲಿ ಸುತ್ತಿಕೊಂಡು ಲಂಕೆಗೆ ಹೊರಟನು.

ರಾವಣನು ಆತ್ಮಲಿಂಗವನ್ನು ಪಡೆದುದನ್ನು ನೋಡಿ ದೇವತೆಗಳಿಗೆ ಹೆದರಿಕೆಯಾಯಿತು. ರಾವಣನು ಮೊದಲೇ ಬಲಿಷ್ಠ; ಈ ಆತ್ಮಲಿಂಗವನ್ನೂ ಪಡೆದು ಇನ್ನೇನು ಮಾಡಿಬಿಡುವನೋ ಎಂದು ಗಾಬರಿಗೊಂಡರು. ಅವರೆಲ್ಲರೂ ವಿಷ್ಣುವಿನ ಬಳಿಗೆ ಹೋಗಿ ಯಾವುದಾದರೂ ಉಪಾಯ ಹೂಡಿ ರಾವಣನಿಂದ ಆತ್ಮಲಿಂಗವನ್ನು ಬೇರ್ಪಡಿಸಬೇಕೆಂದು ಕೇಳಿಕೊಂಡರು. ವಿಷ್ಣುವು ಅವರೊಂದಿಗೆ ಗಣಪತಿಯ ಬಳಿಗೆ ಹೋಗಿ ರಾವಣನಿಂದ ಆತ್ಮಲಿಂಗವನ್ನು ಬೇರ್ಪಡಿಸುವ ಉಪಾಯವನ್ನು ಹೇಳಿಕೊಟ್ಟನು.

ರಾವಣನು ಆತ್ಮಲಿಂಗವನ್ನು ತೆಗೆದುಕೊಂಡು ಲಂಕೆಗೆ ಹಿಂದಿರುಗುತ್ತಿದ್ದಾಗ ಗಣಪತಿಯು ಒಬ್ಬ ಬ್ರಹ್ಮಚಾರಿಯ ವೇಷವನ್ನು ಧರಿಸಿ ಅವನನ್ನು ಸಂಧಿಸಿದನು. ಆಗ ಸಂಜೆಯ ಸಮಯ. ರಾವಣನು ಬ್ರಹ್ಮಚಾರಿಯನ್ನು ಕುರಿತು, 'ಅಯ್ಯಾ, ಈ ಆತ್ಮಲಿಂಗವನ್ನು ನಿನ್ನ ಬಳಿ ಇಟ್ಟುಕೊಂಡಿರು. ನಾನು ಸಂಧ್ಯಾವಂದನೆ ಮುಗಿಸಿ ಬರುವೆನು. ಆದರೆ ಲಿಂಗವನ್ನು ಮಾತ್ರ ಖಂಡಿತಾ



ಗೋಕರ್ಣದ ಗಣಪತಿ

ಕೆಳಗೆ ಇಡಬೇಡ' ಎಂದನು. ಬ್ರಹ್ಮಚಾರಿಯು 'ಹಾಗೆಯೇ ಆಗಲಿ. ಆದರೆ ನೀನು ಮೂರು ಘಳಿಗೆಯೊಳಗೆ ಹಿಂದಿರುಗಬೇಕು. ಇಲ್ಲದಿದ್ದರೆ ಲಿಂಗವನ್ನು ನೆಲದ ಮೇಲೆ ಇಟ್ಟುಬಿಡುವೆ' ಎಂದನು. ರಾವಣನು ಆತ್ಮಲಿಂಗವನ್ನು ಬ್ರಹ್ಮಚಾರಿಯ ಕೈಯಲ್ಲಿ ಕೊಟ್ಟು ಸಂಧ್ಯಾವಂದನೆಗೆ ಹೋದನು. ಆದರೆ ಅವನು ಬರುವುದು ತಡವಾಯಿತು. ಬ್ರಹ್ಮಚಾರಿಯು ಆತ್ಮಲಿಂಗವನ್ನು ನೆಲದ ಮೇಲೆ ಇಟ್ಟುಬಿಟ್ಟನು.

ಘೋರೇಣ ತಪಸಾ ಲಬ್ಧಂ ರಾವಣಾಖ್ಯೇನ ರಕ್ಷಸಾ ।
ತಲ್ಲಿಂಗಂ ಸ್ಥಾಪಯಾಮಾಸ ಗೋಕರ್ಣೇ ಗಣನಾಯಕಃ ।

"ರಾವಣನೆಂಬ ರಾಕ್ಷಸನು ಕ್ರೂರವಾದ ತಪಸ್ಸಿನಿಂದ ಪಡೆದ ಆ ಲಿಂಗವನ್ನು ಗಣಪತಿಯು ಗೋಕರ್ಣದಲ್ಲಿ ಸ್ಥಾಪಿಸಿದನು."

(ಶಿವಮಹಾಪುರಾಣ)

ರಾವಣನು ಎಷ್ಟು ಪ್ರಯತ್ನಪಟ್ಟರೂ ಆತ್ಮ ಲಿಂಗವನ್ನು ಮೇಲೆತ್ತಲು ಸಾಧ್ಯವಾಗಲಿಲ್ಲ. ಮಹಾಬಲಶಾಲಿಯಾದ ರಾವಣನಿಗೇ ಆ ಲಿಂಗವನ್ನು ಕದಲಿಸಲು ಸಾಧ್ಯವಾಗಲಿಲ್ಲವಾದ್ದರಿಂದ ಅದಕ್ಕೆ 'ಮಹಾಬಲೇಶ್ವರ' ಎಂಬ ಹೆಸರು ಬಂತು. ರಾವಣನು ದುಃಖ ಮತ್ತು ಕೋಪಗಳಿಂದ ಆತ್ಮಲಿಂಗವನ್ನು ಸುತ್ತಿ ತಂದಿದ್ದ ವಸ್ತ್ರವನ್ನು ಹರಿದು ನಾಲ್ಕು ಭಾಗ ಮಾಡಿ ನಾಲ್ಕು ದಿಕ್ಕಿಗೆ ಬಿಸಾಡಿದನು. ಅವೂ ನಾಲ್ಕು ಲಿಂಗಗಳಾದವು. ಅವೇ ಸಜ್ಜೇಶ್ವರ, ಗುಣವಂತೇಶ್ವರ, ಮುರಢೇಶ್ವರ ಮತ್ತು ಧಾರೇಶ್ವರ. ಮಹಾಬಲೇಶ್ವರನನ್ನೂ ಸೇರಿಸಿ ಪಂಚಲಿಂಗಗಳು.

ರಾಮಾಯಣದಲ್ಲೂ ಗೋಕರ್ಣದ ಉಲ್ಲೇಖವಿದೆ. ರಾವಣನು ತನ್ನ ತಾಯಿಯ ಆದೇಶದಂತೆ ಗೋಕರ್ಣ ಕ್ಷೇತ್ರದಲ್ಲಿ ತಪಸ್ಸು ಮಾಡಿದನು.

ಪ್ರಾಪ್ಸ್ಯಾಮಿ ತಪಸಾ ಕಾಮಮಿತಿ ಕೃತ್ವಾಧ್ಯವಸ್ಯ ಚ ।
ಆಗಚ್ಛದಾತ್ಮಸಿದ್ಧ್ಯರ್ಥಂ ಗೋಕರ್ಣಸ್ಯಾಶ್ರಮಂ ಶುಭಮ್ ॥

"ಕಷ್ಟ ಸಾಧ್ಯವಾದ ಕಾರ್ಯವನ್ನು ತಪಸ್ಸಿನಿಂದಲೇ ಸಾಧಿಸಬೇಕೆಂದು ಗೋಕರ್ಣ ಕ್ಷೇತ್ರದ ಪವಿತ್ರಾಶ್ರಮಕ್ಕೆ (ರಾವಣನು) ಬಂದನು."
(ವಾಲ್ಮೀಕಿ ರಾಮಾಯಣ, ಉತ್ತರಕಾಂಡ)

ಮಹಾಭಾರತವೂ ಇತರ ಪುರಾಣಗಳೂ ಗೋಕರ್ಣ ಕ್ಷೇತ್ರದ ಮಹಿಮೆಯನ್ನು ವರ್ಣಿಸಿವೆ.

ಅಥ ಗೋಕರ್ಣಮಾಸಾದ್ಯ ತ್ರಿಷು ಲೋಕೇಷು ವಿಶ್ರುತಮ್
ಸಮುದ್ರಮಧ್ಯೇ ರಾಜೇಂದ್ರ ಸರ್ವಲೋಕನಮಸ್ಕೃತಂ ॥
ಯತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ।
ಭೂತಯಕ್ಷಪಿಶಾಚಾಶ್ಚ ಕಿಂನರಾಃ ಸಮಹೋರಗಾಃ ॥
ಸಿದ್ಧಚಾರಣಗಂಧರ್ವಾ ಮಾನುಷಾಃ ಪನ್ನಗಾಸ್ತಥಾ
ಸರಿತಃ ಸಾಗರಾಃ ಶೈಲಾ ಉಪಾಸಂತ ಉಮಾಪತೀಂ ॥

"ಯಾತ್ರಿಕನು (ಕನ್ಯಾತೀರ್ಥದಿಂದ) ಗೋಕರ್ಣ ಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಸಮುದ್ರದ ಮಧ್ಯದಲ್ಲಿರುವ ಆ ಗೋಕರ್ಣ ಕ್ಷೇತ್ರವು ತ್ರಿಲೋಕ

ಪ್ರಸಿದ್ಧವಾದುದು, ಆ ಕ್ಷೇತ್ರದಲ್ಲಿ ಬ್ರಹ್ಮಾಧಿದೇವತೆಗಳೂ, ಋಷಿ-ಮಹರ್ಷಿಗಳೂ, ಭೂತಗಣಗಳೂ, ಯಕ್ಷ-ಪಿಶಾಚರೂ, ಕಿನ್ನರ-ಕಿಂಪುರುಷರೂ, ಸಿದ್ಧ-ಚಾರಣ-ಗಂಧರ್ವರೂ, ನಾಗ-ಪನ್ನಗರೂ, ನದೀ-ನದ-ಸರೋವರಗಳ, ಸಮುದ್ರ ಮತ್ತು ಪರ್ವತಗಳ ಅಧಿದೇವತೆಗಳೂ ಸಹ ಸರ್ವಕಾಲದಲ್ಲಿಯೂ ಉಮಾಕಾಂತನಾದ ಪರಶಿವನ ಪೂಜೆಯಲ್ಲಿ ಆಸಕ್ತರಾಗಿರುತ್ತಾರೆ."

(ಮಹಾಭಾರತ, ವನಪರ್ವ)

ಶೃಣು ಮೋಹಿನಿ ವಕ್ಷ್ಯಾಮಿ ತೀರ್ಥಂ ಪುಣ್ಯಪ್ರದಂ ನೃಣಾಂ ।
ಗೋಕರ್ಣಾಖ್ಯಂ ಹರಕ್ಷೇತ್ರಂ ಸರ್ವಪಾತಕನಾಶನಂ ॥
ಪಶ್ಚಿಮಸ್ಥಸಮುದ್ರಸ್ಯ ತೀರೇಽಸ್ತಿ ವರವರ್ಣಿನಿ !
ಸಾರ್ಧಂ ಯೋಜನವಿಸ್ತಾರಂ ದರ್ಶನಾದಪಿ ಮುಕ್ತಿದಂ ॥

"ಸಕಲ ಪಾಪ ಪರಿಹಾರಕವೂ ಪುಣ್ಯಪ್ರದವೂ ಆದ ಗೋಕರ್ಣವೆಂಬ ಶಿವಕ್ಷೇತ್ರದ ಮಹಾತ್ಮ್ಯೆಯನ್ನು ಕೇಳು. ಆ ಕ್ಷೇತ್ರವು ಪಶ್ಚಿಮ ಸಮುದ್ರ ತೀರದಲ್ಲಿದೆ. ಅದರ ವಿಸ್ತಾರವು ಒಂದೂವರೆ ಗಾವುದ. ಅದು ದರ್ಶನ ಮಾತ್ರದಿಂದಲೇ ಮುಕ್ತಿಯನ್ನು ಕೊಡುವುದು."

(ನಾರದೀಯ ಪುರಾಣಂ)

ಮಮಾಸ್ತಿ ದೇವಿ ಸುಭಗೇ ಕ್ಷೇತ್ರಂ ಗೋಕರ್ಣಸಂಜ್ಞಿತಂ ।
ಗೋಕರ್ಣೇಶಂ ಸಮಾರಾಧ್ಯ ವಿಮುಕ್ತಾ ಬಹವೋ ಜನಾಃ ॥
ಪಶ್ಚಿಮೇ ಸಾಗರೋಪಾಂತ್ಯೇ ತತ್ಕ್ಷೇತ್ರಂ ಮಮ ಕಾಮದಂ ।
ಭೋಗಮೋಕ್ಷಪ್ರದಂ ದೇವಿ ಸರ್ವಪಾಪವಿನಾಶಕಂ ॥

"ಪಶ್ಚಿಮ ಸಮುದ್ರದ ಸಮೀಪದಲ್ಲಿ ಗೋಕರ್ಣವೆಂಬ ಶಿವಕ್ಷೇತ್ರವೊಂದಿರುವುದು. ಅದು ನನಗೆ ಬಹು ಪ್ರಿಯವಾದುದು. ಅನೇಕರು ಗೋಕರ್ಣೇಶ್ವರನನ್ನು ಆರಾಧಿಸಿ ಸ್ಥಿರ ಮುಕ್ತಿಯನ್ನು ಸಂಪಾದಿಸಿರುವರು. ಅದು ಐಹಿಕ ಭೋಗಾದಿಗಳನ್ನು ಒದಗಿಸುವುದಲ್ಲದೆ ಸಕಲ ಪಾಪನಿವಾರಕವೂ ಎನಿಸಿದೆ."

(ಶಿವರಹಸ್ಯ)

ಪಶ್ಚಿಮಾಂಬುಧಿತೀರಸ್ಥಂ ಗೋಕರ್ಣಂ ಕ್ಷೇತ್ರಮುತ್ತಮಮ್ ।
ಬ್ರಹ್ಮಹತ್ಯಾದಿಪಾಪಘ್ನಂ ಸರ್ವ ಕಾಮಫಲಪ್ರದಂ ॥

ಕೃತೇ ಯುಗೇ ಸ ಹಿ ಶ್ವೇತಸ್ತ್ರೇತಾಯಾಂ ಸೋಽತಿಲೋಹಿತಃ ।
ದ್ವಾಪರೇ ಪೀತವರ್ಣಶ್ಚ ಕಲೌ ಶ್ಯಾಮೋ ಭವಿಷ್ಯತಿ ॥
ಆಕ್ರಾಂತ ಸಪ್ತಪಾತಾಲಕುಹರೋಽಪಿ ಮಹಾಬಲಂ ।
ಪ್ರಾಪ್ತೇ ಕಲಿಯುಗೇ ಘೋರೇ ಮೃದುತಾಮುಪಯಾಸ್ಯತಿ ॥

"ಪಶ್ಚಿಮ ದಿಕ್ಕಿನ ಸಮುದ್ರ ತೀರದಲ್ಲಿ ಗೋಕರ್ಣವೆಂಬ ಉತ್ತಮವಾದ ಕ್ಷೇತ್ರವಿದೆ. ಇದು ಬ್ರಹ್ಮಹತ್ಯಾಪಾಪವನ್ನು ನಿವಾರಿಸುವುದು; ಸಕಲ ಇಷ್ಟಾರ್ಥಗಳನ್ನೂ ಈಡೇರಿಸುವುದು. ಈ ಕ್ಷೇತ್ರದಲ್ಲಿರುವ ಮಹಾಬಲಲಿಂಗವು ಕೃತಯುಗದಲ್ಲಿ ಬೆಳ್ಳಗೂ, ತ್ರೇತಾಯುಗದಲ್ಲಿ ಕೆಂಪಗೂ, ದ್ವಾಪರಯುಗದಲ್ಲಿ ಹಳದಿ ಬಣ್ಣವಾಗಿಯೂ, ಕಲಿಯುಗದಲ್ಲಿ ಕಪ್ಪು ಬಣ್ಣವಾಗಿಯೂ ಇರುವುದು. ಮಹಾಬಲಲಿಂಗವು ಸಪ್ತ ಪಾತಾಳಲೋಕಗಳನ್ನೂ ಆವರಿಸಿರುವುದು. ಇದು ಕಲಿಯುಗದಲ್ಲಿ ಮೃದುವಾಗಿರುವುದು.

(ಶಿವಮಹಾಪುರಾಣ)

**ಕಾವೇರಿ ಮಹಾತ್ಮ್ಯ :**

ಕಾವೇರಿನದಿಯು ಕರ್ನಾಟಕದ ಪ್ರಾಣಾಧಾರ. ಇದು ಪುರಾಣ ಕಾಲದಿಂದಲೂ ಪ್ರಸಿದ್ಧ. ಈ ನದಿಯು ಸಹ್ಯಪರ್ವತದಲ್ಲಿ ಹುಟ್ಟುತ್ತದೆ.

ಹಿಂದೆ ಸಹ್ಯಪರ್ವತದಲ್ಲಿ ಕವೇರನೆಂಬ ರಾಜನಿದ್ದನು. ಅವನಿಗೆ ಬ್ರಹ್ಮನ ವರದಿಂದ ವಿಷ್ಣುಮಾಯೆ ಎಂಬ ಮಗಳು ಹುಟ್ಟಿದಳು. ವಿಷ್ಣುಮಾಯೆಯು ಪ್ರಾಪ್ತ ವಯಸ್ಕಳಾದಾಗ ಹಿಮಾಲಯಕ್ಕೆ ಹೋಗಿ ವಿಷ್ಣುವನ್ನು ಕುರಿತು ತಪಸ್ಸು ಮಾಡಿದಳು. ವಿಷ್ಣುವಿನ ಅನುಗ್ರಹದಿಂದ ಲೋಪಾಮುದ್ರೆಯೆಂಬ ಹೆಸರನ್ನು ಪಡೆದು ಆಗಸ್ತ್ಯರನ್ನು ಮದುವೆಯಾದಳು.

ಪಾರ್ವತಿ ಮತ್ತು ಪರಮೇಶ್ವರರ ವಿವಾಹದ ಸಮಯದಲ್ಲಿ ದೇವತೆಗಳೆಲ್ಲರೂ ಹಿಮವತ್ಪರ್ವತಕ್ಕೆ ಹೋಗಿದ್ದರು. ಋಷಿಗಳು, ಮುನಿಗಳು, ಗ್ರಹಗಳು, ನಕ್ಷತ್ರಗಳು ಅಲ್ಲಿ ಸೇರಿದ್ದರು. ಅಗಸ್ತ್ಯರೂ ಹೋಗಿದ್ದರು. ಇವರೆಲ್ಲರ ಸಮಾಗಮದಿಂದ ಹಿಮಾಲಯ ವಿಜೃಂಭಿಸಿತು.

ಹಿಮಾಲಯದ ಹಿರಿಮೆಯನ್ನು ಕಂಡು ದಕ್ಷಿಣದಲ್ಲಿದ್ದ ವಿಂಧ್ಯಪರ್ವತಕ್ಕೆ ಅಸೂಯೆ ಉಂಟಾಯಿತು. ಅದು ಹಿಮಾಲಯದೊಡನೆ ಸ್ಪರ್ಧಿಸಿ ಎತ್ತರೆತ್ತರಕ್ಕೆ ಬೆಳೆಯಲಾರಂಭಿಸಿತು. ಕೊನೆಗೆ ಸೂರ್ಯನನ್ನೇ ಮರೆಮಾಡಿತು. ಇದರಿಂದ ಜಗತ್ತಿನಲ್ಲಿ ಕಗ್ಗತ್ತಲುಂಟಾಗಿ ಜನರು ಹಾಹಾಕಾರಗೊಂಡರು. "ಸ್ವಾಮಿ ಕಾಪಾಡು" ಎಂದು ಪರಶಿವನಲ್ಲಿ ಮೊರೆ ಇಟ್ಟರು.

ಶಂಕರನು ಅಗಸ್ತ್ಯರನ್ನು ಕರೆದು ಮಹರ್ಷಿ, ನಿನ್ನಿಂದ ಲೋಕಕಲ್ಯಾಣವಾಗಬೇಕಾಗಿದೆ. ಗಂಗೆ, ಯಮುನೆ, ಸಿಂಧು, ಸರಸ್ವತಿ ಮೊದಲಾದ ನದಿಗಳೂ ಸಪ್ತಸಾಗರಗಳೂ ನನ್ನ ವಿವಾಹಕ್ಕಾಗಿ ಇಲ್ಲಿಗೆ ಬಂದಿವೆ. ಈ ಎಲ್ಲ ತೀರ್ಥಗಳ ನೀರನ್ನೂ ನೀನು ಒಂದು ಕಮಂಡಲದಲ್ಲಿ ತುಂಬಿಕೋ. ಅದನ್ನು ತೆಗೆದುಕೊಂಡು ಸಹ್ಯಾದ್ರಿಯ ಕಡೆ ಹೊರಡು. ದಾರಿಯಲ್ಲಿ ವಿಂಧ್ಯಪರ್ವತ ಅಡ್ಡ ಬರುತ್ತದೆ. ಅದು ತುಂಬ ಎತ್ತರವಾಗಿ ಬೆಳೆಯುತ್ತಿದೆ. ಆ ಪರ್ವತದ ಬೆಳವಣಿಗೆಯನ್ನು ತಡೆಗಟ್ಟು.

"ಅನಂತರ ನೀನು ಸಹ್ಯಪರ್ವತಕ್ಕೆ ಹೋಗಿ ಅಲ್ಲಿರುವ ನೆಲ್ಲಿಕಾಯಿ ಮರವೊಂದರ ಬಳಿ ತಪಸ್ಸಿಗೆ ತೊಡಗು. ಆ ಮರದ ಆದಿಭಾಗದಲ್ಲಿ ಬ್ರಹ್ಮನೂ ಮಧ್ಯದಲ್ಲಿ ವಿಷ್ಣುವೂ ಅಂತ್ಯದಲ್ಲಿ ನಾನೂ ನೆಲಸಿದ್ದೇವೆ. ನೀನು ತಪಸ್ಸಿನಲ್ಲಿ ತೊಡಗಿರುವಾಗ ನನ್ನ ಕಮಂಡಲದಲ್ಲಿರುವ ಸಕಲ ತೀರ್ಥಗಳಿಂದಲೂ ನಿನ್ನ ಪತ್ನಿಯ ಸಹಾಯದಿಂದಲೂ ಒಂದು ನದಿಯು ಜನಿಸುವುದು."

ಸಂರಕ್ಷ್ಯ ತಾ ಸಹ್ಯಶೌಲ್ಯಾ ಸ್ಥಾಪಯಾಮಿ ಮುನೀಶ್ವರಾಃ ॥
ಸಹ್ಯಮೂಲೇ ಸಂಗತೇ ಯಾ ಭವಿತ್ರೀಯಂ ಸರಿದ್ವರಾ ॥
ಸಾ ಸಹ್ಯಜೇತಿ ಪ್ರಥಿತಾ ಭವಿತ್ರೀಯಂ ಕವೇರಜಾ ।
ಮರುದ್ವೃಧೇತಿ ಕಥಿತಾ ಭವತ್ಯತ್ರ ಸರಿದ್ವರಾ ॥

"ಈ ಕಲಶದ ನೀರು ಸಹ್ಯಪರ್ವತದ ಬುಡಕ್ಕೆ ಸೇರಿ ಅಲ್ಲಿಂದ ನದಿಯ ರೂಪವಾಗಿ ಹರಿಯುತ್ತಾ ಸಹ್ಯಜಾ, ಕಾವೇರಿ ಎಂಬುದಾಗಿ ಪ್ರಸಿದ್ಧಿ ಪಡೆಯುತ್ತದೆ. ಈ ಶ್ರೇಷ್ಠ ನದಿಯೇ 'ಮರುದ್ವೃಧಾ' (ವಾಯುವಿನಿಂದ ವೃದ್ಧಿಯಾದುದು) ಎಂಬುದಾಗಿಯೂ ಪ್ರಸಿದ್ಧಿ ಪಡೆಯುತ್ತದೆ."

(ಶಿವರಹಸ್ಯ)

ತದುತ್ತರೇ ಮರಕತಃ ಶಂಕರಸ್ತೃಣಶಂಕರಃ ।
ಕಾವೇರಿ ಸರಿತಾಂ ಶ್ರೇಷ್ಠಾ ತಸ್ಯಾಸ್ತೀರದ್ವಯೋಽಪ್ಯಹಃ ॥
ಕ್ವಚಿತ್ಕ್ಷೇತ್ರೇಷು ಹರಿಣಾ ಸೇವಿತೋ ನಿವಸಾಮ್ಯಹಂ ।
ಯಥಾ ತ್ರಿಪಥಗಾ ಗಂಗಾ ಯಮುನಾ ಚ ಸರಸ್ವತೀ ॥
ಆರ್ಯಾವರ್ತೋತ್ತರೇ ಭಾಗೇ ಪಾವನಾಃ ಸರಿತೋ ವರಾಃ ।
ತಥಾ ವಿಂಧ್ಯಾದ್ದಕ್ಷಿಣತೋ ಸಹ್ಯಜಾತಾ ಚ ಪಾರ್ವತಿ ॥

"ಈ ಕಾವೇರಿಯು ಎಲ್ಲ ನದಿಗಳಲ್ಲಿಯೂ ಶ್ರೇಷ್ಠವಾದುದು. ನಾನು ಅದರ ಎರಡು ತೀರಗಳಲ್ಲಿಯೂ ನೆಲಸಿ ಕೆಲವು ಕ್ಷೇತ್ರಗಳಲ್ಲಿ ವಿಷ್ಣುವಿನಿಂದ ಸೇವಿಸಲ್ಪಡುತ್ತೇನೆ. ಸ್ವರ್ಗ ಮರ್ತ್ಯ ಪಾತಾಳಾದಿಗಳಲ್ಲಿಯೂ ಮೂರು ರೀತಿಯಿಂದ ಪ್ರವಹಿಸುವ ಗಂಗಾ ಯಮುನಾ ಮತ್ತು ಸರಸ್ವತಿ ನದಿಗಳು ಆರ್ಯಾವರ್ತದ ಉತ್ತರ ಭಾಗದಲ್ಲಿ ಪ್ರಸಿದ್ಧವಾಗಿರುವಂತೆ ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿ ಹುಟ್ಟಿದ ಈ ನದಿಯು ಪ್ರಖ್ಯಾತವೂ ಪಾವನವೂ ಆಗುವುದು."

(ಶಿವರಹಸ್ಯ)

ತಸ್ಯ ಖಂಡದ್ವಯೇ ಭಾವಿ ತತ್ರ ಶೇತೇ ಹರಿಃ ಸ್ವಯಂ ।
ಗಜಾರಣ್ಯಾಧಿಪಂ ಮಾಂ ತು ದೃಷ್ಟ್ವಾ ಸಂಪೂಜ್ಯ ಮಾಂ ಹರಿಃ ॥

"ಆ ನದಿಯು ಎರಡು ಕವಲಾಗಿ ಹರಿಯುವ ಸ್ಥಳದಲ್ಲೆಲ್ಲಾ ಮಹಾವಿಷ್ಣುವು ಮಲಗಿರುವನು. ಗಜಾರಣ್ಯಕ್ಕೆ ಸ್ವಾಮಿಯಾದ ನನ್ನ ದರ್ಶನಮಾಡಿ ಪೂಜಿಸಿದ ನಂತರ ವಿಷ್ಣುವು ಅಲ್ಲಿಯೇ ನೆಲಸುತ್ತಾನೆ."

(ಶಿವರಹಸ್ಯ)

ಶಿವನ ಇಚ್ಛೆಯಂತೆ ಅಗಸ್ತ್ಯನು ವಿವಿಧ ತೀರ್ಥಗಳನ್ನು ಕಮಂಡಲದಲ್ಲಿ ತುಂಬಿಕೊಂಡು ಲೋಪಾಮುದ್ರೆಯೊಂದಿಗೆ ದಕ್ಷಿಣದ ಕಡೆ ಹೊರಟನು. ಅವನು ವಿಂಧ್ಯಪರ್ವತದ ಬಳಿಗೆ ಬಂದಾಗ ಆ ಪರ್ವತವು ಅಗಸ್ತ್ಯನನ್ನು ಕಂಡು ಭಕ್ತಿಯಿಂದ ತಲೆಬಾಗಿ ನಮಸ್ಕರಿಸಿತು. ಅಗಸ್ತ್ಯನು, "ವಿಂಧ್ಯನೇ, ನಾನು ದೇವತೆಗಳ ಕಾರ್ಯಕ್ಕಾಗಿ ದಕ್ಷಿಣಕ್ಕೆ ಹೊರಟಿರುವೆ. ಹಿಂದಿರುಗಿ ಬರುವವರೆಗೆ ಇದೇ ಸ್ಥಿತಿಯಲ್ಲಿ ಇರು" ಎಂದನು. ವಿಂಧ್ಯಪರ್ವತವು ಅದಕ್ಕೆ ಒಪ್ಪಿಕೊಂಡಿತು. ಅದು ಅಗಸ್ತ್ಯನಿಗೆ ನಮಸ್ಕರಿಸುವಾಗ ತಲೆಬಾಗಿಸಿದ್ದರಿಂದ ಸೂರ್ಯಚಂದ್ರರ ಬೆಳಕು ಮತ್ತೆ ಭೂಮಿಯಲ್ಲಿ ಕಾಣಸಲಾರಂಭಿಸಿತು. ಕಗ್ಗತ್ತಲು ಮಾಯವಾಗಿ ಎಲ್ಲರಿಗೂ ಹರ್ಷವಾಯಿತು. ದಕ್ಷಿಣಕ್ಕೆ ಹೋದ ಅಗಸ್ತ್ಯ ಮತ್ತೆ ಉತ್ತರಕ್ಕೆ ಹಿಂದಿರುಗಲೇ ಇಲ್ಲ. ಆದ್ದರಿಂದ ವಿಂಧ್ಯಪರ್ವತ ಮತ್ತೆ ಬೆಳೆಯಲೇ ಇಲ್ಲ.

ಅಗಸ್ತ್ಯನು ವಿಂಧ್ಯಪರ್ವತವನ್ನು ದಾಟಿ ಸಹ್ಯಪರ್ವತ ಶ್ರೇಣಿಯ ಬ್ರಹ್ಮಗಿರಿಗೆ ಬಂದನು. ಲೋಪಾಮುದ್ರೆಗೆ ಸಹ್ಯಪರ್ವತವನ್ನು ನೋಡಿ ಆನಂದವಾಯಿತು. ಅದು ಅವಳ ತಂದೆ ಕವೇರರಾಜನ ಸ್ಥಳವಲ್ಲವೆ ? ತಾನೂ ಆ ಪರ್ವತದಲ್ಲಿ ನದಿಯಾಗಿ ಹರಿಯಬೇಕೆಂದು ಅವಳಿಗೆ ಆಸೆಯಾಯಿತು. ಅಗಸ್ತ್ಯನ

ಒಪ್ಪಿಗೆಯನ್ನು ಪಡೆದು ಜಲರೂಪವನ್ನು ತಾಳಿದಳು. ಅವನ ಕಮಂಡಲುದಲ್ಲಿದ್ದ ಇತರ ತೀರ್ಥಗಳೊಂದಿಗೆ ಸೇರಿದಳು.



ಅಗಸ್ತ್ಯನು ಸಹ್ಯಪರ್ವತದ ನೆಲ್ಲಿಕಾಯಿ ಮರದ ಬಳಿಗೆ ಬಂದನು. ಹತ್ತಿರದಲ್ಲೇ ಇದ್ದ ಒಂದು ದೊಡ್ಡ ಚಪ್ಪಟೆಕಲ್ಲಿನ ಮೇಲೆ ಕಮಂಡಲುವನ್ನಿಟ್ಟು ತಪಸ್ಸಿಗೆ ತೊಡಗಿದನು.

ಈ ಸಮಯದಲ್ಲಿ ಸೂರಪದ್ಮನೆಂಬ ಒಬ್ಬ ರಾಕ್ಷಸನು ಆ ಪ್ರದೇಶದಲ್ಲಿ ಮಳೆ ಬೀಳುವುದನ್ನು ತಡೆಹಿಡಿದಿದ್ದ. ಮಳೆ ಬೆಳೆಗಳಿಲ್ಲದೆ ಜನ ಕಂಗೆಟ್ಟಿದ್ದರು. ಇದನ್ನು ಕಂಡ ಇಂದ್ರನು ದುಃಖಿಗೊಂಡು ದಕ್ಷಿಣದಲ್ಲಿ ಯಥೇಚ್ಛವಾಗಿ ನೀರು ದೊರಕುವಂತೆ ಮಾಡಬೇಕೆಂದು ಗಣಪತಿಯನ್ನು ಪ್ರಾರ್ಥಿಸಿಕೊಂಡ. ಗಣಪತಿಯು ಕಾಗೆಯ ರೂಪದಲ್ಲಿ ಸಹ್ಯಪರ್ವತಕ್ಕೆ ಬಂದು ಬಂಡೆಯ ಮೇಲಿದ್ದ ಅಗಸ್ತ್ಯನ ಕಮಂಡಲುವನ್ನು ಮಗುಚಿಹಾಕಿದ. ಕಮಂಡಲದಲ್ಲಿದ್ದ ನೀರು ಹೊರಗೆ ಚೆಲ್ಲಿ ದೊಡ್ಡ ನದಿಯಾಗಿ ಹರಿಯಿತು. ಹೀಗೆ ನದಿಯಾದ ಲೋಪಾಮುದ್ರೆಯು ಕವೇರರಾಜನ ಮಗಳಾದುದರಿಂದ ಆ ನದಿಗೆ ಕಾವೇರಿ ಎಂಬ ಹೆಸರು ಬಂತು.

ಅಗಸ್ತ್ಯನು ಗಣಪತಿಗೆ ನಮಸ್ಕರಿಸಿ ಹೀಗೆ ಹೇಳಿದನು :

ತವ ಪಾದಾಂಬುಜೇ ಭಕ್ತಿರ್ಭೂಯಾದವ್ಯಭಿಚಾರಿಣೀ ।
ಕಾವೇರೀ ಚ ಸರಿನ್ನೀತಾ ಬಲಯೇ ಪರಮೇಶಿತುಃ ।
ಪತನಾತ್ಕುಂಡಿಕಾಯಾಸ್ಸಾ ಗಜವಕ್ತ್ರಗತಾ ಖಲು ॥

"ಹೇ ಗಣಪತಿಯೇ, ನಿನ್ನಲ್ಲಿ ನನಗೆ ಸ್ಥಿರವಾದ ಭಕ್ತಿ ಇರಲಿ. ಶಿವನ ಆರಾಧನೆಗಾಗಿ ಕಾವೇರಿಯನ್ನು ತಂದಿದ್ದೆನು. ಕಮಂಡಲುವು ಉರುಳಿದುದರಿಂದ ಕಾವೇರಿಯು ನೆಲದಲ್ಲಿ ಹರಿದುಹೋದಳು."

(ಶಂಕರಸಂಹಿತಾ)

ತತಃ ಕಾಲೇನ ತತ್ರಾಭೂಚ್ಛೈಲೇ ಸಹ್ಯೋದ್ಭವಾ ಸರಿತ್ ।
ಕಾವೇರೀತಿ ತದಾ ಲೋಲೇ ಸಿಂಧುತೀರೇ ಮಹೇಶ್ವರೀ ॥

"ಹೀಗೆ ಕಾವೇರಿಯು ಸಹ್ಯಾದ್ರಿಯಲ್ಲಿ ನದಿಯ ರೂಪದಿಂದ ಜನಿಸಿ ಸಮುದ್ರಗಾಮಿನಿಯಾಗಿ ಮಹೇಶ್ವರನನ್ನು ಸೇರಿದಳು."

(ಶಿವರಹಸ್ಯ)

ಕಾವೇರಿಯ ಮಹಿಮೆಯನ್ನು ರಾಮಾಯಣ ಮಹಾಭಾರತಗಳೂ ಪುರಾಣಗಳೂ ಕೊಂಡಾಡಿವೆ.

ತತಸ್ತಾಮಾಪಗಾಂ ದಿವ್ಯಾಂ ಪ್ರಸನ್ನಸಲಿಲಾಂ ಶಿವಾಮ್ ।
ತತ್ರ ದ್ರಕ್ಷ್ಯಥ ಕಾವೇರೀಂ ವಿಹೃತಾಮಪ್ಸರೋಗಣೈಃ ॥

"ತಿಳಿ ನೀರಿನಿಂದ ಶೋಭಿಸುವ ದಿವ್ಯವಾದ ಕಾವೇರಿ ನದಿಯನ್ನು ಕಾಣು ವಿರಿ. ಆ ಪುಣ್ಯನದಿಯಲ್ಲಿ ಅಪ್ಸರೆಯರು ವಿಹರಿಸುವರು."

(ವಾಲ್ಮೀಕಿ ರಾಮಾಯಣ, ಕಿಷ್ಕಿಂಧಾಕಾಂಡ)

ತತೋ ಗಚ್ಛೇತ ಕಾವೇರೀಂ ವೃತಾಮಪ್ಸರಸಾಂ ಗಣೈಃ ।
ತತ್ರ ಸ್ನಾತ್ವಾ ನರೋ ರಾಜನ್ಗೋ ಸಹಸ್ರ ಫಲಂ ಲಭೇತ್ ॥

"ಅಪ್ಸರೆಯರಿಂದ ಸೇವಿಸಲ್ಪಡುವ ಕಾವೇರಿನದೀ ತೀರಕ್ಕೆ ಪ್ರಯಾಣ ಮಾಡಬೇಕು. ಆ ಪುಣ್ಯನದಿಯಲ್ಲಿ ಸ್ನಾನಮಾಡುವುದರಿಂದ ಸಹಸ್ರ ಗೋವು ಗಳನ್ನು ದಾನಮಾಡಿದ ಫಲವು ಲಭಿಸುವುದು."

(ಮಹಾಭಾರತ, ವನಪರ್ವ)

ಪಿತಸಾಂ ತೀರವಾಸೇನ ಇಂದ್ರಲೋಕಮವಾಪ್ನುಯಾತ್ ।
ಸಹ್ಯಾದ್ರಿಜಾ ಮಹಾಪುಣ್ಯಾ ಕಾವೇರೀತಿ ಮಹಾನದೀ ॥
ಸಪ್ತವಿಂಶಮುಖಾ ಪ್ರೋಕ್ತಾ ಸರ್ವಾಭೀಷ್ಟಪ್ರದಾಯಿನೀ ।
ತತ್ತೀರಾಃ ಸ್ವರ್ಗದಾಶ್ಚೈವ ಬ್ರಹ್ಮವಿಷ್ಣುಪದಪ್ರದಾಃ ॥
ಶಿವಲೋಕಪ್ರದಾಃ ಶೈವಾಃ ತಥಾಭೀಷ್ಟಫಲಪ್ರದಾಃ ॥

"ಸಹ್ಯಪರ್ವತದಲ್ಲಿ ಜನಿಸಿರುವ ಕಾವೇರಿನದಿಯು ಮಹಾ ಪುಣ್ಯಕರ ವಾದುದು. ಅದು ಇಪ್ಪತ್ತೇಳು ಮುಖವಾಗಿ ಹರಿಯುವುದು. ಸಕಲ ಇಷ್ಟಾ ರ್ಥಗಳನ್ನೂ ಉಂಟುಮಾಡುವಂತಹುದು. ಆ ಕಾವೇರಿನದಿಯ ತೀರಗಳು ಬ್ರಹ್ಮಲೋಕ, ವಿಷ್ಣುಲೋಕ ಮತ್ತು ಶಿವಲೋಕಗಳನ್ನು ಉಂಟುಮಾಡು ವುವು. ಆ ನದಿಯ ತೀರದಲ್ಲಿರುವ ಶಿವಕ್ಷೇತ್ರಗಳು ಶಿವಲೋಕವನ್ನುಂಟು ಮಾಡುವುವು."

(ಶಿವಮಹಾ ಪುರಾಣ)

ಕಾವೇರಿಯು ಸಪ್ತಗಂಗೆಯರಲ್ಲಿ ಒಂದು. ಕಳಶಪೂಜೆಯ ಸಮಯದಲ್ಲಿ ಇತರರ ಜೊತೆಗೆ ಕಾವೇರಿಯನ್ನು ಆವಾಹಿಸುತ್ತಾರೆ.

ಗಂಗೇಚ ಯಮುನೇ ಚೈವ ಗೋದಾವರಿ ಸರಸ್ವತೀ
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ॥

"ಎಲೆ ಗಂಗೆಯೇ, ಯಮುನೆಯೇ, ಗೋದಾವರಿಯೇ, ಸರಸ್ವತಿಯೇ, ನರ್ಮದೆಯೇ, ಸಿಂಧುವೇ, ಕಾವೇರಿಯೇ ಈ ಜಲದ ಸನ್ನಿಧಿಗೆ ಬನ್ನಿ."

**ಕಾವೇರಿಯ ಮಡಿಲಲ್ಲಿ :**

ಕಾವೇರಿನದಿಯು ಹುಟ್ಟುವ ಸಹ್ಯಪರ್ವತವೂ ಪುರಾಣಪ್ರಸಿದ್ಧವೇ. ಇದು ಸಹ್ಯಾದ್ರಿಯೆಂದೂ ಕರೆಯಲ್ಪಡುತ್ತದೆ. ಸಹ್ಯಾದ್ರಿಯು ಪಶ್ಚಿಮಘಟ್ಟಗಳ ಸೆರಗು. ಇದು ಸಪ್ತಕುಲಪರ್ವತಗಳಲ್ಲಿ ಒಂದು. (ಸಪ್ತ ಪರ್ವತಗಳು-ಮಹೇಂದ್ರ, ಮಲಯ, ಸಹ್ಯ, ಹಿಮಾಲಯ, ರೈವತಕ, ವಿಂಧ್ಯ ಮತ್ತು ಅರಾವಳಿ.) ಸಹ್ಯಪರ್ವತದಿಂದ ಕಾವೇರಿಯೇ ಅಲ್ಲದೇ ಭೀಮರಥಿ, ಕೃಷ್ಣ, ವೇಣಿ, ತುಂಗ, ಭದ್ರ, ಸುಪ್ರಕಾರಾ, ವಾಹ್ಯಾ ಮೊದಲಾದ ನದಿಗಳು ಹುಟ್ಟುತ್ತವೆ.

ಕಾವೇರಿನದಿಯು ಹರಿಯುವ ಮಾರ್ಗದಲ್ಲಿ ಅನೇಕ ಪುಣ್ಯಕ್ಷೇತ್ರಗಳಿವೆ. ರಾಮನಾಥಪುರ (ವಹ್ನಿತೀರ್ಥ), ಶ್ರೀರಂಗಪಟ್ಟಣ (ಗೌತಮಾಶ್ರಮ), ಕರೀಘಟ್ಟ (ನೀಲಾದ್ರಿ), ತಿರುಮಕೂಡಲು (ಅಗಸ್ತ್ಯೇಶ್ವರ), ತಲಕಾಡು (ಗಜಾರಣ್ಯ) ಇವು ಕರ್ನಾಟಕದಲ್ಲಿ ಪ್ರಮುಖವಾದವು.

ಕಾವೇರಿಯು ಬ್ರಹ್ಮ ರಂಗನಾಥನನ್ನು ಕುರಿತು ತಪಸ್ಸುಮಾಡಿ ಅವನ ಸಾನ್ನಿಧ್ಯವನ್ನು ಕೋರಿದಳು. ರಂಗನಾಥನು "ನೀನು ಹರಿಯುವಾಗ ಎರಡು ಕವಲಾಗಿ ಒಡೆಯುವ ಸ್ಥಳಗಳಲ್ಲಿ ನಾನು ವಾಸಮಾಡುತ್ತೇನೆ" ಎಂದನು. ಕಾವೇರಿಯು ತನ್ನ ಮಾರ್ಗದಲ್ಲಿ ಮೂರು ಕಡೆಗಳಲ್ಲಿ ಕವಲಾಗಿ ಹರಿದು ಮತ್ತೆ ಸೇರುತ್ತಾಳೆ. ಆ ಸ್ಥಳಗಳಲ್ಲಿ ಸ್ವತಃ ಮಹಾವಿಷ್ಣುವು ರಂಗನಾಥನಾಗಿ ಮಲಗಿರುವನು. ಅವೇ ಆದಿರಂಗ (ಶ್ರೀರಂಗಪಟ್ಟಣ), ಮಧ್ಯರಂಗ (ಶಿವಸಮುದ್ರ) ಮತ್ತು ಶ್ರೀರಂಗ (ಇದು ತಮಿಳುನಾಡಿನಲ್ಲಿದೆ).

ಪ್ರಸನ್ನಃ ಪುಂಡರೀಕಾಕ್ಷಃ ಪ್ರಥಮಂ ರಂಗಮಂದಿರೇ
ಆಧಿಕ್ಯಂ ಸುರವಾಹಿನ್ಯಾಃ ಸಹ್ಯಜಾಯೈ ದದೌ ಸ್ವಯಂ

"ಕಾವೇರಿಯ ತಪಸ್ಸಿನಿಂದ ಸಂತೋಷಗೊಂಡ ನಾರಾಯಣನು ರಂಗನಾಥನ ಸನ್ನಿಧಿಯಲ್ಲಿ (ಆ ನದಿಗೆ) ಗಂಗೆಗಿಂತಲೂ ಹೆಚ್ಚಿನ ಮಹತ್ವನ್ನು ಕೊಟ್ಟನು.

(ಬ್ರಹ್ಮಾಂಡ ಪುರಾಣ)

ಶ್ರೀರಂಗಪಟ್ಟಣದಲ್ಲಿ ಕಾವೇರಿಯು ಮೂರು ದಿಕ್ಕುಗಳಲ್ಲಿ ಹರಿಯುವುದರಿಂದ ಅವಳಿಗೆ 'ತ್ರಿಪಥಗೆ' ಎಂದೂ ಹೆಸರು ಬಂದಿತು.

ಶ್ರೀರಂಗಪಟ್ಟಣಕ್ಕೆ ಗೌತಮಾಶ್ರಮವೆಂದೂ ಗೌತಮಕ್ಷೇತ್ರವೆಂದೂ



ತಲಕಾವೇರಿ – ಕಾವೇರಿಯ ಉಗಮಸ್ಥಾನ

ಹೆಸರಿದೆ. ಹಿಂದೊಮ್ಮೆ ಹಲವು ಕಡೆ ಮಳೆಯೇ ಇಲ್ಲದೆ ಘೋರವಾದ ಕ್ಷಾಮ ಬಂದಿತು. ಆಗ ಜನರು ಆಹಾರವನ್ನರಸುತ್ತಾ ಗೌತಮರಿದ್ದಲ್ಲಿಗೆ ಬಂದರು. ಗೌತಮರು ಬಂದವರನ್ನು ಆದರದಿಂದ ಸತ್ಕರಿಸಿದರು. ಅವರನ್ನು ತಮ್ಮಲ್ಲಿಯೇ ಇಟ್ಟುಕೊಂಡರು. ತಮ್ಮ ತಪಶ್ಶಕ್ತಿಯಿಂದ ಕ್ಷಾಮವನ್ನು ಪರಿಹರಿಸಿದರು. ಆ ಸ್ಥಳವೇ ಗೌತಮಕ್ಷೇತ್ರ ಅಥವಾ ಶ್ರೀರಂಗಪಟ್ಟಣ.

ಗೌತಮಾಸ್ಯಾಶ್ರಮಂ ಪುಣ್ಯಂ ದೇವರ್ಷಿಗಣಸೇವಿತಂ ।
ಸರ್ವಪಾಪಪ್ರಶಮನಂ ಸರ್ವೋಪದ್ರವಶಾಂತಿದಂ ॥

"ಪುಣ್ಯಕರವಾದ ದೇವತೆ. ಮತ್ತು ಋಷಿಗಣಗಳಿಂದ ಸೇವಿಸಲ್ಪಡುತ್ತಿರುವ ಪಾಪ ಪರಿಹಾರಕರವಾದ ಸಕಲ ಉಪದ್ರವನಿವಾರಕವಾದುದು ಗೌತಮಾಶ್ರಮ."

(ನಾರದೀಯ ಪುರಾಣ)

ಶ್ರೀರಂಗಪಟ್ಟಣದಿಂದಾಚೆ ನರಸೀಪುರವಿದೆ. ಇಲ್ಲಿ ತಿರುಮಕೂಡಲು ಎಂಬ ಪವಿತ್ರ ಕ್ಷೇತ್ರವಿದೆ. ತಿರುಮಕೂಡಲಿನಲ್ಲಿ ಅಗಸ್ತ್ಯೇಶ್ವರಲಿಂಗವಿದೆ. ಹಿಂದೆ ಇಲ್ಲಿಗೆ ಅಗಸ್ತ್ಯರು ಬಂದಿದ್ದರು. ಸುತ್ತಮುತ್ತಲಿನ ಸುಂದರ ಸನ್ನಿವೇಶದಿಂದ ಪ್ರಭಾವಿತರಾಗಿ ಇಲ್ಲೊಂದು ಲಿಂಗವನ್ನು ಸ್ಥಾಪಿಸಲು ನಿರ್ಧರಿಸಿದರು. ಅದೇ ತ್ರಿಕೂಟೇಶ್ವರ. ತಿರುಮಕೂಡಲಿನಲ್ಲಿ ಕಾವೇರಿ, ಕಪಿಲಾ ಮತ್ತು ಸ್ಫಟಿಕ ಸರೋವರಗಳ ಸಂಗಮವಾಗುವುದು. ಇಲ್ಲಿ ನರಸಿಂಹಸ್ವಾಮಿಯು ನೆಲಸಿದ್ದಾನೆ.

ತಸ್ಯಾ ಪಶ್ಚಿಮವಾಹಿನ್ಯಾಃ ತೀರೇ ಪ್ರಾಹ್ಲಾದರ್ಯಪ್ರಜಾಃ
ಪಶ್ಚಿಮೇ ನೃಹರಿಃ ಲಕ್ಷ್ಮ್ಯಾ ಸಹಾಧ್ಯಾಸ್ತೇ ಚತುರ್ಭುಜಃ ।

"(ಕಾವೇರಿಯ) ಪಶ್ಚಿಮವಾಹಿನಿಯ ತೀರದಲ್ಲಿ ಪಶ್ಚಿಮ ದಿಕ್ಕಿನಲ್ಲಿ ನಾಲ್ಕು ಭುಜಗಳುಳ್ಳ ನೃಸಿಂಹನು ಲಕ್ಷ್ಮೀದೇವಿಯೊಂದಿಗೆ ನೆಲಸಿ ಜನಗಳನ್ನು ಆನಂದಗೊಳಿಸುತ್ತಾ ಇದ್ದಾನೆ."

(ಬ್ರಹ್ಮಾಂಡ ಪುರಾಣ)

ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಮುನಿಭಿಃ ಪರಸೇವಿತಂ ।
ಕಪಿಲೇನ ಸಮಾಯುಕ್ತಾ ನದೀ ಸತ್ಯೋತ್ತಮಾಂ ಗತಾ ॥

ಕಪಿಲಾಖ್ಯಾ ಭವೇತ್ತತ್ರ ತ್ರಿಕೂಟೇಶಶ್ಚ ತೇನಾಹಿ ।
ಪೂಜಿತೋಥ ಸ್ತುತಸ್ತೇನ ಕಪಿಲೇನ ಮಹಾತ್ಮನಾ ॥

"ಈ ತ್ರಿಕೂಟಕ್ಷೇತ್ರವು ಸಕಲ ಕ್ಷೇತ್ರಗಳಲ್ಲಿಯೂ ಉತ್ತಮವಾದ ಕ್ಷೇತ್ರವೆನಿಸಿ ಮುನಿಗಳಿಂದ ಸೇವಿಸಲ್ಪಡುತ್ತಿರುವುದು. ಕಪಿಲಮುನಿಯಿಂದ ಪ್ರೇರಿತವಾಗಿ ಹೊರಟ ನದಿಯು ಸಹ್ಯಪರ್ವತದಲ್ಲಿ ಹುಟ್ಟಿದ ಕಾವೇರಿಯೊಡನೆ ಸಂಗಮವಾಗಿ 'ಕಪಿಲಾ' ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆಯುವುದು. ಆ ಕಪಿಲ ಮಹಾಮುನಿಯಿಂದಲೂ ಈ ಕ್ಷೇತ್ರದಲ್ಲಿರುವ ತ್ರಿಕೂಟೇಶ್ವರನು ಪೂಜಿಸಲ್ಪಟ್ಟಿರುವನು."

(ಶಿವ ರಹಸ್ಯ)

ಕಾವೇರಿತೀರದಲ್ಲಿರುವ ಗಜಾರಣ್ಯವು (ಈಗಿನ ತಲಕಾಡು) ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಇದಕ್ಕೆ ಮತಂಗಾರಣ್ಯವೆಂದೂ ಹೆಸರಿದೆ. ಇಲ್ಲಿ ಜಂಬುಕೇಶ್ವರನ ಲಿಂಗವಿದೆ. ಹಿಂದೆ ವಿಶ್ವಕರ್ಮನು ಜಂಬುಕೇಶ್ವರನನ್ನು ಪೂಜೆಮಾಡಿ ಶಿಲ್ಪಶಾಸ್ತ್ರವನ್ನು ಅರಿತನು. ಅನಂತರ ತನ್ನ ಶಿಲ್ಪಶಾಸ್ತ್ರಜ್ಞಾನಕ್ಕೆ ಸಾರ್ಥಕತೆ ಲಭಿಸಲೆಂದು ಐದು ಪ್ರಾಕಾರಗಳಿಂದಲೂ ಅನೇಕ ಮಂಟಪಗಳಿಂದಲೂ ಕೂಡಿದ ಗರ್ಭಗುಡಿಯನ್ನು ಮಹೇಶ್ವರನಿಗೂ ದೇವಿಗೂ ನಿರ್ಮಿಸಿಕೊಟ್ಟನು.

ಭುಕ್ತಿಮುಕ್ತಿಪ್ರದಂ ಕ್ಷೇತ್ರಂ ಗಜಾರಣ್ಯಂ ಮಹೇಶಿತುಃ
ಅರ್ಕಸಂಪೂಜಿತಂ ನಿತ್ಯಂ ವರುಣೇನ ಸುಪೂಜಿತಂ ॥

"ಇಹದಲ್ಲಿ ಸಕಲ ಭೋಗಗಳನ್ನೂ ಪರದಲ್ಲಿ ಮೋಕ್ಷವನ್ನೂ ಕೊಡುವ ಈ ಮಹೇಶ್ವರನ ಗಜಾರಣ್ಯಕ್ಷೇತ್ರವು ಸೂರ್ಯ ಮತ್ತು ವರುಣರಿಂದ ನಿತ್ಯವೂ ಪೂಜಿಸಲ್ಪಡುವ ಮಹಾಕ್ಷೇತ್ರವೆನಿಸುವುದು."

(ಶಿವರಹಸ್ಯ)

ಕಾವೇರಿ ನದಿಯು ತಲಕಾಡಿನಿಂದ ಮುಂದೆ ಹರಿಯುವಾಗ ಒಂದು ಪರ್ವತ ಅಡ್ಡವಾಯಿತು. ಆಗ ಇಂದ್ರನು ತನ್ನ ವಜ್ರಾಯುಧದಿಂದ ಆ ಪರ್ವತವನ್ನು ಭೇದಿಸಿ ಎರಡು ಭಾಗವಾಗಿ ಮಾಡಿದನು. ಕಾವೇರಿಯ ಪ್ರವಾಹವು ಮುಂದೆ ಹರಿಯಲು ಸಹಾಯವಾದ್ದರಿಂದ ಇದಕ್ಕೆ ಶಿಲಾಭೇದಿಕ್ಷೇತ್ರ ಎಂದು ಹೆಸರು ಬಂದಿತು. ಕಾವೇರಿಯು ಇಲ್ಲಿ ತಪಸ್ಸುಮಾಡುತ್ತಿದ್ದ ಋಷಿಗಳನ್ನು ಉದ್ಧರಿಸಲು ಎರಡು ಭಾಗವಾಗಿ ಹರಿದಳು. ಆದುದರಿಂದ ಈ ಸ್ಥಳದ



ಲ್ಲಿಯೂ ಸ್ವಾಮಿ ರಂಗನಾಥನು ವಾಸಮಾಡುತ್ತಿದ್ದಾನೆ. ಇದೇ ಮಧ್ಯರಂಗ ಅಥವಾ ಶಿವಸಮುದ್ರ.

ಸಂಸ್ತುತ್ಯ ಪೂಜ್ಯಮಖಿಲಾಂಡಮಹೇಶ್ವರೀಂ ಚ ।
ತತ್ರೈವ ಶೇಷಶಯನೋಽಷಿತವಾನ್ಸರಂಗಃ ॥

"(ಈಶ್ವರನನ್ನು) ಸ್ತೋತ್ರಮಾಡಿ ಆ ರಂಗಸ್ವಾಮಿಯೆನಿಸಿದ ವಿಷ್ಣುವು ಅಲ್ಲಿಯೇ ಆದಿಶೇಷನ ಮೇಲೆ ಮಲಗಿ ವಾಸಮಾಡತೊಡಗಿದನು."

(ಶಿವರಹಸ್ಯ)

ಶ್ರೀರಂಗಪಟ್ಟಣದ ಸಮೀಪದಲ್ಲಿ ಕರಿಘಟ್ಟವು ನೀಲಾಚಲವೆಂದೂ ನೀಲಾದ್ರಿಯೆಂದೂ ಹೆಸರುಪಡೆದಿದೆ. ಹಿಂದೆ ಶ್ರೀರಾಮನ ಸೈನಿಕರಾದ ವಾನರರು ಲಂಕೆಗೆ ಸೇತುವೆಯನ್ನು ಕಟ್ಟುವಾಗ ಆ ಸೇತುವೆಗಾಗಿ ಅವರು ಬೆಟ್ಟಗುಡ್ಡಗಳನ್ನು ಹೊತ್ತು ತಂದು ಸಮುದ್ರದಲ್ಲಿ ಹಾಕುತ್ತಿದ್ದರು. ಆ

ಸುಗ್ರೀವನು ಶೇಷಾಚಲದ (ತಿರುಪತಿ ಬೆಟ್ಟ) ಭಾಗವಾದ ನೀಲಶಿಖರವನ್ನು ಹೊತ್ತು ತರುತ್ತಿದ್ದನು. ಯಾದವಾದ್ರಿಯಲ್ಲಿದ್ದ (ಮೇಲುಕೋಟೆ) ವಿಷ್ಣು ಭಕ್ತರು ಅದನ್ನು ನೋಡಿ ಸುಗ್ರೀವನನ್ನು ಕುರಿತು "ಭಗವಂತನ ವಿಗ್ರಹಕ್ಕೆ ಸಮಾನವಾದ ಈ ಶಿಖರವನ್ನು ಕಾವೇರಿ ಮತ್ತು ಲೋಕಪಾವನಿಯರ ಸಂಗಮ ಸ್ಥಳದಲ್ಲಿ ಇಡು. ನಿನಗೆ ಪುಣ್ಯ ಲಭಿಸುವುದು" ಎಂದರು. ಸುಗ್ರೀವನು ಹಾಗೆಯೇ ಮಾಡಿದನು. ಅದೇ ಕರೀಘಟ್ಟ, ನೀಲಾದ್ರಿ. ಹಿಂದೆ ಇಲ್ಲಿ ಭೃಗು ಮಹರ್ಷಿಗಳು ತಪಸ್ಸು ಮಾಡಿದ್ದರಿಂದ ಇದಕ್ಕೆ ಭೃಗುಕ್ಷೇತ್ರವೆಂದೂ ಹೆಸರಿದೆ.

ಸನಾಮ್ನಾ ನೀಲಶೈಲೋಽಪಿ ಮಹಿಮ್ನಾ ಶೇಷಭೂಧರಃ ।
ಸೇವ್ಯತೇ ದೇವಗಂಧರ್ವಸುರಸಿದ್ಧರ್ಷಿಮಾನವೈಃ ॥
ಮುಖೇ ತೀರಂ ನಮೋ ಮಧ್ಯೇ ಶ್ರೀನಿವಾಸಪದಂ ಮಹತ್ ।
ಶಿರೋಭಾಗೇ ಚ ಮಧ್ಯಾಂತಂ ಭೃಗುಸ್ತತ್ರಾ ಜಪನ್ಮುನಿಃ ॥

"ಹೆಸರಿನಲ್ಲಿ ನೀಲಾಚಲವಾದರೂ ಮಹತ್ತಿನಲ್ಲಿ ಆ ಪರ್ವತ ಶೇಷಾಚಲವೇ ಆಗಿದೆ. ದೇವತೆಗಳೂ ಗಂಧರ್ವರೂ ಸಿದ್ಧಾದಿಗಳೂ ಇದನ್ನು ಎಂದೆಂದೂ ಸೇವಿಸುತ್ತಿರುವರು. ಈ ಬೆಟ್ಟ ಸಾಕ್ಷಾತ್ 'ಶ್ರೀನಿವಾಸಾಯ ನಮಃ' ಎಂಬ ಮಂತ್ರಸ್ವರೂಪಿ. ಭೃಗುವು ಇಲ್ಲಿಯೇ ತಪಸ್ಸು ಮಾಡಿದನು."

(ಬ್ರಹ್ಮಾಂಡ ಪುರಾಣ)

ಇತರ ತೀರ್ಥಗಳು, ಕ್ಷೇತ್ರಗಳು :

ತುಂಗಭದ್ರೆಯೂ ಕರ್ನಾಟಕದ ಒಂದು ಪ್ರಮುಖ ನದಿ, ಪವಿತ್ರ ತೀರ್ಥ. 'ಗಂಗಾ ಸ್ನಾನ, ತುಂಗಾ ಪಾನ' ಎಂಬುದು ನಾಣ್ಣುಡಿ. ತುಂಗಭದ್ರೆಯ ನೀರು ಅಷ್ಟು ಸಿಹಿ. ಪಶ್ಚಿಮ ಘಟ್ಟಗಳ ಮಧ್ಯೆ ವರಾಹ ಪರ್ವತವಿದೆ. ಅಲ್ಲಿ ತುಂಗೆ, ಭದ್ರೆ ಮತ್ತು ನೇತ್ರಾವತಿ ನದಿಗಳು ಹುಟ್ಟುತ್ತವೆ. ತುಂಗೆ ಮತ್ತು ಭದ್ರೆ ಸಂಗಮವಾಗಿ ತುಂಗಭದ್ರಾನದಿ ಆಗುತ್ತದೆ. ರಾಮಾಯಣದಲ್ಲಿ ವರ್ಣಿತವಾಗಿರುವ ಪಂಪಾಸರೋವರವು ತುಂಗಭದ್ರಾನದಿಯನ್ನು ಸೇರುತ್ತದೆ.

ತುಂಗಭದ್ರಾ ಸುಪ್ರಯೋಗಾ ವಾಹ್ಯಾ ಕಾವೇರಿ ಚೈವ ತು ।
ದಕ್ಷಿಣಾಪಥನದ್ಯಸ್ತಾಃ ಸಹ್ಯಪಾದಾದ್ವಿನಿಃ ಸೃತಾಃ ॥

"ತುಂಗಭದ್ರೆ, ಸುಪ್ರಯೋಗೆ, ವಾಹ್ಯ ಮತ್ತು ಕಾವೇರಿ ದಕ್ಷಿಣ ದೇಶದಲ್ಲಿ ಹರಿಯುವ ನದಿಗಳು. ಇವು ಸಹ್ಯಾದ್ರಿಯ ತಪ್ಪಲಿನಲ್ಲಿ ಹುಟ್ಟುತ್ತವೆ."

(ಮತ್ಸ್ಯ ಮಹಾಪುರಾಣ)

ತುಙ್ಗಭದ್ರಾ ಸುಪ್ರಯೋಗಾ ವಾಹ್ಯಾ ಕಾವೇರ್ಯಥಾಪಗಾ ।
ಸಹ್ಯಪಾದವಿನಿಷ್ಕ್ರಾನ್ತಾ ಇತ್ಯೇತಾ ಸರಿದುತ್ತಮಾಃ ॥

ತುಂಗಭದ್ರಾ, ಸುಪ್ರಯೋಗಾ, ವಾಹ್ಯಾ, ಕಾವೇರಿ ಎಂಬ ನದಿಗಳು ಸಹ್ಯಪರ್ವತದ ತಪ್ಪಲಿನಲ್ಲಿ ಹುಟ್ಟುವುವು. ಈ ನದಿಗಳು ಉತ್ತಮವಾದ ಮಹಾ ನದಿಗಳಾಗಿವೆ.

(ಮಾರ್ಕಂಡೇಯ ಪುರಾಣ)

ತುಂಗಭದ್ರಾ ನದಿಯ ದಡದಲ್ಲಿ ಅನೇಕ ಪುಣ್ಯಕ್ಷೇತ್ರಗಳಿವೆ. ಪ್ರಸಿದ್ಧವಾದ ಶೃಂಗೇರಿಯೂ ಅವುಗಳಲ್ಲಿ ಒಂದು. ಇಲ್ಲಿ ಮಹರ್ಷಿ ಋಷ್ಯಶೃಂಗರೂ ಅವರ ತಂದೆ ವಿಭಾಂಡಕರೂ ತಪಸ್ಸು ಮಾಡುತ್ತಿದ್ದರು. ಋಷ್ಯಶೃಂಗರು ಮಹಾತ್ಮರು. ಒಮ್ಮೆ ಅಂಗದೇಶದಲ್ಲಿ ಬಹುಕಾಲ ಮಳೆಯೇ ಬೀಳದೆ ಕ್ಷಾಮಸ್ಥಿತಿ ಉಂಟಾಯಿತು. ಆಗ ಆ ದೇಶದ ದೊರೆ ರೋಮಪಾದನು ಋಷ್ಯಶೃಂಗರು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ತನ್ನವರನ್ನು ಕಳುಹಿಸಿ ಅವರನ್ನು ಅಂಗದೇಶಕ್ಕೆ ಬರಮಾಡಿಕೊಂಡನು. ಕೂಡಲೇ ಅಂಗದೇಶದಲ್ಲಿ ಧಾರಾಕಾರ ಮಳೆಯಾಯಿತು. ದಶರಥನು ಮಾಡಿದ ಪುತ್ರಕಾಮೇಷ್ಟಿಯಾಗದಲ್ಲಿ ಪೌರೋಹಿತ್ಯ ವಹಿಸಿದ್ದವರೂ ಋಷ್ಯಶೃಂಗರೇ. ಋಷ್ಯಶೃಂಗರು ತಪಸ್ಸು ಮಾಡಿದ್ದ ಸ್ಥಳವೇ ಶೃಂಗೇರಿ.

ಆಶ್ರಮಶ್ಚೈವ ಪುಣ್ಯಾಖ್ಯಃ ಕಾಶ್ಯಪಸ್ಯ ಮಹಾತ್ಮನಃ
ಋಷ್ಯಶೃಂಗಃ ಸುತೋ ಯಸ್ಯ ತಪಸ್ವೀ ಸಂಯತೇಂದ್ರಿಯಃ

"ಆ ಪುಣ್ಯಾಶ್ರಮದಲ್ಲಿ ಕಾಶ್ಯಪ ವಂಶಸ್ಥನೂ (ವಿಭಾಂಡಕನ ಪುತ್ರನೂ) ಮಹಾತ್ಮನೂ ಇಂದ್ರಿಯಗಳನ್ನು ಜಯಿಸಿದವನೂ ಆದ ಋಷ್ಯಶೃಂಗನು ತಪಸ್ಸು ಮಾಡಿದನು."

(ಮಹಾಭಾರತ, ವನಪರ್ವ)

ತುಂಗಭದ್ರೆಯ ದಡದಲ್ಲಿರುವ ಪಂಪಾಕ್ಷೇತ್ರವು ಬಳ್ಳಾರಿ ಜಿಲ್ಲೆಯಲ್ಲಿರುವ ಹಂಪೆಯೆಂದು ಈಗಾಗಲೇ ಓದಿದ್ದೇವೆ.

ತುಂಗಭದ್ರಾ ನದಿಯ ತೀರದಲ್ಲಿ ಗುಹಾರಣ್ಯ ಕ್ಷೇತ್ರವಿದೆ. ಹಿಂದೆ ಇಲ್ಲಿ



ಋಷ್ಯಶೃಂಗೇಶ್ವರ ದೇವಾಲಯ, ಕಿಗ್ಗ

ಗುಹನೆಂಬ ರಾಕ್ಷಸನು ವಾಸವಾಗಿದ್ದನು. ಅವನು ಬ್ರಹ್ಮನನ್ನು ಕುರಿತು ಘೋರವಾದ ತಪಸ್ಸುಮಾಡಿ ತನಗೆ ಹರನಿಂದಾಗಲೀ ಹರಿಯಿಂದಾಗಲೀ ಸಾವುಂಟಾಗಬಾರದೆಂಬ ವರವನ್ನು ಪಡೆದನು. ಆ ದೇವತೆಗಳೇ ತನ್ನನ್ನು ಕೊಲ್ಲಲು ಸಾಧ್ಯವಾಗದಿದ್ದರೆ ಇತರರೇನು ಮಾಡಿಯಾರು ಎಂದು ಅವನ ಯೋಚನೆ. ಕಾಲಕ್ರಮದಲ್ಲಿ ಗುಹನ ಉಪಟಳ ತಾಳಲಸಾಧ್ಯವಾಯಿತು. ದೇವತೆಗಳಿಗೂ ಮನುಷ್ಯರಿಗೂ ಇನ್ನೇನು ಗತಿ ಎನಿಸಿತು. ಅವರೆಲ್ಲ ಹರಿ ಮತ್ತು ಹರರ ಬಳಿಗೆ ಹೋಗಿ ತಮ್ಮನ್ನು ಗುಹನ ಕೈಯಿಂದ ಪಾರುಮಾಡಬೇಕೆಂದು ಪ್ರಾರ್ಥಿಸಿದರು. ಆಗ ಹರಿಹರರಿಬ್ಬರೂ ಸೇರಿ ಒಂದೇ ದೇಹದಲ್ಲಿ 'ಹರಿಹರ' ಎಂಬ ದೇವತೆಯಾಗಿ ಅವತರಿಸಿ ಗುಹನನ್ನು ಸಂಹರಿಸಿದರು. ಗುಹನು ಸಾಯುವ ಮುನ್ನ ಆ ಕ್ಷೇತ್ರಕ್ಕೆ ತನ್ನ ಹೆಸರಿಡಬೇಕೆಂದೇ ಪ್ರಾರ್ಥಿಸಿದ್ದರಿಂದ ಅದು ಗುಹಾರಣ್ಯ ಕ್ಷೇತ್ರವಾಯಿತು.

ಚಿತ್ರದುರ್ಗ ಜಿಲ್ಲೆಯಲ್ಲಿರುವ ಹರಿಹರವೇ ಈ ಕ್ಷೇತ್ರ.

ತಿರುಮಕೂಡಲಿನಲ್ಲಿ ಕಾವೇರಿಯೊಡನೆ ಸಂಗಮಿಸುವ ಕಪಿಲಾನದಿಯೂ



ನಂದಿದುರ್ಗ

ಪವಿತ್ರವಾದ ತೀರ್ಥ. ಹಿಂದೆ ಸಗರನೆಂಬ ಚಕ್ರವರ್ತಿಯು ಅಶ್ವಮೇಧಯಾಗವನ್ನು ಮಾಡಬೇಕೆಂದಿದ್ದಾಗ ಯಾಗದ ಕುದುರೆಯನ್ನು ದೇವತೆಗಳು ಅಪಹರಿಸಿದ ಕಥೆ ನಮಗೆಲ್ಲ ತಿಳಿದೇ ಇದೆ. ಆಗ ಸಗರನ ಮಕ್ಕಳು ಕುದುರೆಯನ್ನು ಹುಡುಕಿಕೊಂಡು ಪಾತಾಳಲೋಕಕ್ಕೆ ಹೋದರು. ಅಲ್ಲಿ ಕಪಿಲನೆಂಬ ಮುನಿಯು ತಪಸ್ಸುಮಾಡುತ್ತಿದ್ದನು. ಯಾಗದ ಕುದುರೆಯು ಅಲ್ಲಿಯೇ ಹುಲ್ಲು ಮೇಯುತ್ತಿತ್ತು. ಕಪಿಲನೇ ಯಜ್ಞಾಶ್ವವನ್ನು ಕದ್ದಿರಬೇಕೆಂದು ಯೋಚಿಸಿ ಆ ರಾಜಕುಮಾರರು ಮುನಿಯ ಮೇಲೆ ಆಕ್ರಮಣಮಾಡಲು ನುಗ್ಗಿದರು. ಕಪಿಲಮುನಿಯು ಕಣ್ಣುಗಳನ್ನು ತೆರೆದು ಹೂಂಕಾರ ಮಾಡಿದನು. ಸಗರನ ಮಕ್ಕಳೆಲ್ಲರೂ ಸುಟ್ಟು ಬೂದಿಯಾದರು. ಇದರಿಂದ ದುಃಖಿತನಾದ ಕಪಿಲಮುನಿಯು ನೀಲಪರ್ವತಕ್ಕೆ ಹೋಗಿ ಶಿವನನ್ನು ಕುರಿತು ತಪಸ್ಸುಮಾಡಿ ಅವನನ್ನು ಒಲಿಸಿಕೊಂಡನು. ಶಿವನು ಕಪಿಲನ ತಪಸ್ಸಿನ ಫಲವಾಗಿ ಒಂದು ನದಿಯು ಹುಟ್ಟುವುದೆಂದೂ ಆಗ ಅವನ ಪಾಪವು ಪರಿಹಾರವಾಗುವುದೆಂದೂ ತಿಳಿಸಿದನು. ಕೂಡಲೇ ಕಪಿಲನ ಬ್ರಹ್ಮರಂಧ್ರದಿಂದ ಅಮೃತವು ಉಕ್ಕಿ ಭೂಮಿಯ ಮೇಲೆ ಬಿತ್ತು. ಅದೊಂದು ತುಳಸಿಗಿಡವಾಯಿತು. ಆ ತುಳಸಿಯ ಮೂಲದಿಂದ ಶುಭ್ರಜಲವುಳ್ಳ ನದಿಯೊಂದು ಹುಟ್ಟಿತು. ಅದೇ ಕಪಿಲಾನದಿ. (ಮೂಲ ಶ್ಲೋಕವನ್ನು ಕಾವೇರಿ ತೀರದಲ್ಲಿರುವ ಶಿರುಮಕೂಡಲ ಕ್ಷೇತ್ರದ ವಿವರಣೆಯಲ್ಲಿ ಉಲ್ಲೇಖಿಸಿದೆ.)

ಕಪಿಲಾನದಿಯ ದಡದಲ್ಲಿ ಶ್ರೀಕಂಠೇಶ್ವರ ಕ್ಷೇತ್ರವಿದೆ. ಇದು ನಂಜನಗೂಡು ಎಂದು ಪ್ರಸಿದ್ಧವಾಗಿದೆ.

ಹಿಂದೆ ದೇವತೆಗಳೂ ರಾಕ್ಷಸರೂ ಅಮೃತವನ್ನು ಪಡೆಯುವ ಆಸೆಯಿಂದ ಕ್ಷೀರಸಾಗರವನ್ನು ಕಡೆಯಲಾರಂಭಿಸಿದರು. ಆದರೆ ಅವರು ಮೊದಲು ಗಣಪತಿಯನ್ನು ಪೂಜಿಸದೇ ಇದ್ದುದರಿಂದ ಅಮೃತದ ಬದಲು ಕಾಲಕೂಟವೆಂಬ ಘೋರವಾದ ವಿಷವು ಹುಟ್ಟಿತು. ಅದರ ದಳ್ಳುರಿಯನ್ನು ಸಹಿಸಲಾರದೆ ದೇವತೆಗಳು ದಕ್ಷಿಣ ಕೈಲಾಸವಾದ ಈ ಕ್ಷೇತ್ರಕ್ಕೆ ಬಂದು ಶಿವನ ಮೊರೆಹೊಕ್ಕರು. ಶಿವನು ಆ ಕಾಲಕೂಟವನ್ನು ತಾನೇ ಕುಡಿದುಬಿಟ್ಟನು.

ಇತ್ಥಂ ವಿಬುಧವಾಕ್ಯಂ ತೇ ತಲ್ಲಿಂಗಸ್ಥೋ ಮಹೇಶ್ವರಃ
ಸಂಭಕ್ಷ್ಯ ಗರಲಂ ಘೋರಂ ಶ್ರೀಕಂಠೋಽಭೂಚ್ಚ ತತ್ರ ಹಿ ॥



"ಹೀಗೆ ದೇವತೆಗಳ ಸ್ತೋತ್ರವಚನಗಳಾದ ಮೇಲೆ ಲಿಂಗರೂಪಿಯಾದ ಮಹೇಶ್ವರನು ಹೊರಬಂದು ಘೋರವಾದ ಕಾಲಕೂಟ ವಿಷವನ್ನು ತಿಂದು 'ಶ್ರೀಕಂಠ' ಎಂದು ಪ್ರಸಿದ್ಧನಾದನು."

(ಶಿವರಹಸ್ಯ)

ತಸ್ಮಾಚ್ಛ್ರೀಕಂಠಮುತ್ಕೃಷ್ಟಂ ಕ್ಷೇತ್ರೇಷ್ವಾದ್ಯಂ ಚಿರಂತನಂ ।

"ಆದ್ದರಿಂದ ಶ್ರೀಕಂಠಕ್ಷೇತ್ರವು ಕ್ಷೇತ್ರಗಳಲ್ಲೆಲ್ಲಾ ಉತ್ತಮವೂ ಮೊದಲನೆಯದೂ ಬಹು ಪುರಾತನವೂ ಆಗಿರುವುದು."

(ಶಿವರಹಸ್ಯ)

ಹಿಂದೆ ವಸಿಷ್ಠರು ವಿಶ್ವಾಮಿತ್ರನ ಶಾಪದಿಂದ ಮಕ್ಕಳನ್ನು ಕಳೆದುಕೊಂಡು ತೀರ್ಥಯಾತ್ರೆಯನ್ನು ಕೈಗೊಂಡರು. ಅವರು ದಕ್ಷಿಣದಲ್ಲಿದ್ದಾಗ ಕಾವೇರಿಯಲ್ಲಿ

ಯಿಂದು ಶ್ವೇತಾದ್ರಿಯಲ್ಲಿ ವೆಂಕಟೇಶನನ್ನು ಪ್ರತಿಷ್ಠಾಪಿಸಿದರು. ಈ ಶ್ವೇತಾದ್ರಿಯೇ ಬಿಳಿಗಿರಿರಂಗನಬೆಟ್ಟ. ಈ ಬೆಟ್ಟಕ್ಕೆ ಚಂಪಕಾರಣ್ಯ ಎಂಬ ಹೆಸರೂ ಇದೆ.

ಕಾವೇರ್ಯಾ ದಕ್ಷಿಣೇ ಭಾಗೇ ಯೋಜನಾಯುತಮಾತ್ರಕೇ ।
ಶ್ವೇತಾಚಲ ಇತಿ ಖ್ಯಾತಃ ಸಿದ್ಧಗಂಧರ್ವಸೇವಿತಃ ॥

"ಕಾವೇರಿಯಿಂದ ದಕ್ಷಿಣದಲ್ಲಿ ಒಂದು ಗಾವುದ ದೂರದಲ್ಲಿಯೂ ಸಿದ್ಧಗಂಧರ್ವರಿಂದ ಸೇವಿತವಾಗಿಯೂ ಶ್ವೇತಾಚಲ ಎಂಬ (ಪರ್ವತವಿರುವುದು)."

(ಬ್ರಹ್ಮಾಂಡ ಪುರಾಣ)

ಈ ಬಿಳಿಗಿರಿರಂಗನಬೆಟ್ಟದಲ್ಲಿ ಭಾರ್ಗವಿ ಎಂಬ ನದಿಯು ಹುಟ್ಟಿ ಕಾವೇರಿಯನ್ನು ಸೇರುವುದು.

ಕೈಲಾಸದಲ್ಲಿ ಶಂಕರನ ಗಣದಲ್ಲಿ ಒಬ್ಬನಾದ ನಂದಿಯು ಒಮ್ಮೆ ಶಂಕರನ ಶಾಪದಿಂದ ಭೂಲೋಕಕ್ಕೆ ಹೋಗಬೇಕಾಯಿತು.

ನಂದಿಯು ಭೂಲೋಕದಲ್ಲಿ ಸಂಚರಿಸುತ್ತಿದ್ದಾಗ ಒಂದು ಬೆಟ್ಟಕ್ಕೆ ಬಂದನು. ಕೂಡಲೇ ಅವನು ಒಂದು ದೊಡ್ಡ ಗೂಳಿಯಾಗಿ ಬದಲಾವಣೆ ಹೊಂದಿದನು. ಇದೇ ಸಮಯದಲ್ಲಿ ಭೂಲೋಕದಲ್ಲಿ ಮಳೆ ಬೆಳೆಗಳಿಲ್ಲದೆ ಕ್ಷಾಮವುಂಟಾಯಿತು. ಆಗ ದೇವಲೋಕದ ಕಾಮಧೇನುವು ಭೂಲೋಕಕ್ಕೆ ಬಂದು ನಂದಿಯನ್ನು ಸೇರಿತು. ನಂದಿ ಮತ್ತು ಕಾಮಧೇನುಗಳ ಸಮಾಗಮದಿಂದ ಸಹಸ್ರಾರು ಕರುಗಳು ಹುಟ್ಟಿದುವು. ಕಾಮಧೇನುವು ತನ್ನ ಮಕ್ಕಳಿಗಾಗಿ ಕೆಚ್ಚಲಿನಿಂದ ಧಾರಾಕಾರವಾಗಿ ಹಾಲು ಸುರಿಸಿತು. ಈ ಕ್ಷೀರಪ್ರವಾಹವೇ ಕ್ಷೀರ ನದಿ. ಕ್ಷಾಮಪೀಡಿತ ಜನ ಹಾಲನ್ನು ಕುಡಿದು ಸಂತೃಪ್ತರಾದರು. ನಂದಿಯು ತಪಸ್ಸುಮಾಡಿದ ಆ ಬೆಟ್ಟ ನಂದಿಗಿರಿ ಎಂದು ಪ್ರಸಿದ್ಧವಾಯಿತು. ಅದೇ ಈಗಿನ ನಂದಿಬೆಟ್ಟ ಅಥವಾ ನಂದಿದುರ್ಗ. ಇಲ್ಲಿ ಪಾಲಾರ್ (ಕ್ಷೀರ) ನದಿಯು ಹುಟ್ಟುತ್ತದೆ.

ನಂದಿನಾಧ್ಯುಷ್ಯಿತೋ ಯಸ್ಮಾತ್ ಸ ವೈ ನಂದಿಗಿರಿಃ ಸ್ಮೃತಃ
ಕ್ಷೀರಪೂರೇಣ ಮಹತಾ ನಂದಿನಾಮ್ನೋ ಮಹಾಗಿರೇಃ ॥

"ಆ ಗಿರಿಯಲ್ಲಿ ನಂದಿಯು ವಾಸಮಾಡಿದ ನಿಮಿತ್ತ ಅದು ನಂದಿಗಿರಿಯೆಂಬ ಅನ್ವರ್ಥನಾಮವನ್ನು ಹೊಂದಿತು. ಆ ನಂದಿ ಪರ್ವತದಿಂದ ಕ್ಷೀರದ ಮಹಾ ಪ್ರವಾಹವು ಉಂಟಾಯಿತು."

(ಬ್ರಹ್ಮಾಂಡ ಪುರಾಣ)

## ಅವಲೋಕನ ಗ್ರಂಥಗಳು


೧. ಶ್ರೀ ವಾಲ್ಮೀಕಿ ರಾಮಾಯಣ, ಆನಂದರಾಮಾಯಣ, ಅದ್ಭುತ ರಾಮಾಯಣ

೨. ಶ್ರೀ ವ್ಯಾಸ ಮಹಾಭಾರತ, ಶ್ರೀಮದ್ಭಾಗವತ

೩. ವಾಯು ಪುರಾಣ

೪. ವಾಮನ ಪುರಾಣ

೫. ಮಾರ್ಕಂಡೇಯ ಪುರಾಣ

೬. ಅಗ್ನಿ ಪುರಾಣ

೭. ವರಾಹ ಪುರಾಣ

೮. ಸ್ಕಾಂದ ಪುರಾಣ

೯. ಶಿವಪುರಾಣ

೧೦. ಬ್ರಹ್ಮಾಂಡ ಪುರಾಣ

೧೧. ವಿಷ್ಣು ಧರ್ಮೋತ್ತರ ಪುರಾಣ

೧೨. ಪದ್ಮ ಪುರಾಣ

೧೩. ನಾರದೀಯ ಪುರಾಣ

೧೪. ಶ್ರೀ ಸೂತಸಂಹಿತಾ

೧೫. ಗಾರ್ಗಸಂಹಿತಾ

೧೬. ಶ್ರೀ ಶಿವರಹಸ್ಯ

೧೭. ಕರ್ನಾಟಕದ ಇತಿಹಾಸ ದರ್ಶನ — ಡಾ॥ ಎಂ. ವಿ. ಕೃಷ್ಣರಾವ್ ಮತ್ತು ಎಂ. ಕೇಶವ ಭಟ್

೧೮. ಕರ್ನಾಟಕ ಸಂದರ್ಶನ — ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ

೧೯. ಕರ್ನಾಟಕ ಸಾಮ್ರಾಜ್ಯ — ಶ್ರೀ ರಾಮಚಂದ್ರ ಹಣುಮಂತ ದೇಶಪಾಂಡೆ

೨೦. ದೇವಭೂಮಿ ಗೋಮಂತಕ — ಶ್ರೀ ಶಾ. ಮಂ. ಕೃಷ್ಣರಾಯ

೨೧. ಕೊಡಗಿನ ಇತಿಹಾಸ — ಶ್ರೀ ಡಿ. ಎನ್. ಕೃಷ್ಣಯ್ಯ

೨೨. ತುಳುನಾಡು — ಶ್ರೀ ಪಿ. ಗುರುರಾಜ ಭಟ್

೨೩. ಪುರಾಣನಾಮ ಚೂಡಾಮಣಿ

೨೪. ಕನ್ನಡ ವಿಶ್ವಕೋಶ

೨೫. ಜ್ಞಾನಗಂಗೋತ್ರಿ

೨೬. ಕರ್ನಾಟಕದ ಪರಂಪರೆ

